| | | | | | |
|---|---|---|---|---|---|
| 58 | ಖಾಸಗಿ ವಿತ್ತ ನಿಗಮಗಳು, (ಫೈನಾನ್ಸ್ ಕಾರ್ಪೋರೇಷನ್) ಚಿಟ್ ಫಂಡ್‌ಗಳು ಹಾಗೂ ಕಾನೂನು ಬದ್ಧ ಬ್ಯಾಂಕಿಂಗ್ ರಹಿತ ನಗದು ವಹಿವಾಟು ಸಂಸ್ಥೆಗಳಲ್ಲಿ ಉದ್ಯೋಗ | 415.12 | 580.12 | 10793 | 15083 |
| 59 | ಶೌಚಾಲಯಗಳು, ಸ್ನಾನಗೃಹಗಳು, ಒಳಚರಂಡಿಗಳನ್ನು ಶುಚಿ ಮಾಡುವ (Scavenging) ಕೆಲಸಗಳಲ್ಲಿ ಉದ್ಯೋಗ. (ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಪಂಚಾಯತ್ ರಾಜ್ ಸಂಸ್ಥೆಗಳನ್ನು ಹೊರತುಪಡಿಸಿ). | 574.74 | 624.74 | 14943 | 16243 |
| 60 | ಹಾಲು ಶೇಖರಣೆ, ಸಂಸ್ಕರಣೆ ಹಾಗೂ ವಿತರಣಾ ಪ್ರಕ್ರಿಯೆಯ ಉದ್ದಿಮೆಗಳಲ್ಲಿ ಉದ್ಯೋಗ | 415.12 | 490.12 | 10793 | 12743 |
| 61 | ಸಾರ್ವಜನಿಕ ಸಾರಿಗೆ ಸಂಸ್ಥೆಗಳ ಉದ್ದಿಮೆಗಳಲ್ಲಿ ಉದ್ಯೋಗ | 415.12 | 515.12 | 10793 | 13393 |
| 62 | ಕಾಗದ, ಪಲ್ಪ್ ಕಾಗದ, ರಟ್ಟಿನ ಹಲಗೆ (ಕಾರ್ಡ್‌ಬೋರ್ಡ್), ಹುಲ್ಲಿನ ಹಲಗೆ (ಸ್ಟ್ರಾ ಬೋರ್ಡ್) ಮತ್ತು ನ್ಯೂಸ್ ಪ್ರಿಂಟ್ ಉದ್ದಿಮೆಗಳಲ್ಲಿ ಉದ್ಯೋಗ | 434.8 | 643.01 | 11305 | 16718 |
| 63 | ಅಕ್ಕಿ, ಧಾನ್ಯಗಳು ಮತ್ತು ಬೇಳೆ ಗಿರಣಿ ಉದ್ದಿಮೆಗಳಲ್ಲಿ ಉದ್ಯೋಗ | 434.8 | 643.01 | 11305 | 16718 |
| 64 | ರಬ್ಬರ್ ಉತ್ಪನ್ನಗಳು (ಪೋಮ್ ಮತ್ತು ಕಾಯರ್ ರಬ್ಬರ್ ಸಹಿತ) ಉದ್ದಿಮೆಗಳಲ್ಲಿ ಉದ್ಯೋಗ | 434.8 | 643.01 | 11305 | 16718 |
| 65 | ಔಷಧಿಗಳು, ಗೃಹಪಯೋಗಿ ವಸ್ತುಗಳ ವೃತ್ತಿಪರ ಪ್ರವರ್ತಕ ಮತ್ತು ಮಾರಾಟದಲ್ಲಿ ಉದ್ಯೋಗ | 415.12 | 510.12 | 10793 | 13263 |
| 66 | ಭದ್ರತಾ ಏಜೆನ್ಸಿಗಳಲ್ಲಿ ಉದ್ಯೋಗ. (ಕಛೇರಿ ಸಿಬ್ಬಂದಿ ಹಾಗೂ ಭದ್ರತಾ ಸಿಬ್ಬಂದಿಗಳನ್ನು ಏಜೆನ್ಸಿಯ ಮೂಲಕ ನಿಯೋಜಿಸಿಕೊಳ್ಳುವ ಎಲ್ಲಾ ಸಂಸ್ಥೆಗಳು ಹಾಗೂ ಉದ್ದಿಮೆಗಳ ಸಹಿತ). | 469.82 | 560.12 | 12215 | 14563 |

| | | | | | |
|---|---|---|---|---|---|
| 67 | ರೇಷ್ಮೆ ಘಟಕಗಳಲ್ಲಿ ಮತ್ತು ಪ್ರಕ್ರಿಯೆಗಳಲ್ಲಿ ಉದ್ಯೋಗ ಭಾಗ–1 | 418.74 | 589.08 | 10887 | 15316 |
| 68 | ರೇಷ್ಮೆ ಘಟಕಗಳಲ್ಲಿ ಮತ್ತು ಪ್ರಕ್ರಿಯೆಗಳಲ್ಲಿ ಉದ್ಯೋಗ ಭಾಗ–2 | 434.8 | 643.01 | 11305 | 16718 |
| 69 | ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳಲ್ಲಿ ಉದ್ಯೋಗ | 434.8 | 643.01 | 11305 | 16718 |
| 70 | ಸ್ಪಿನ್ನಿಂಗ್ ಮಿಲ್ ಉದ್ದಿಮೆಗಳಲ್ಲಿ ಉದ್ಯೋಗ | 343.84 | 376.38 | 8939.9 | 9785.9 |
| 71 | ಸ್ಪನ್ ಪೈಪುಗಳು, ಕಾಂಕ್ರೀಟ್ ಪೈಪುಗಳು, ಸಾನಿಟರಿ ಫಿಟ್ಟಿಂಗ್‌ಗಳು, ಪ್ಲೈನ್ ಸಿಮೆಂಟ್ ಕಾಂಕ್ರೀಟ್ (ಪಿ.ಸಿ.ಸಿ.) ಹಾಗೂ ರೀ–ಇನ್‌ಪೋರ್ಸ್‌ಡ್ ಸಿಮೆಂಟ್ ಕಾಂಕ್ರೀಟ್ (ಆರ್.ಸಿ.ಸಿ). ಪೈಪುಗಳು ಮತ್ತು ಕಂಬಗಳ ಉತ್ಪಾದನಾ ಉದ್ದಿಮೆಗಳಲ್ಲಿ ಉದ್ಯೋಗ | 415.12 | 515.12 | 10793 | 13393 |
| 72 | ಲೋಹದ ಅಲ್ಮೇರಾಗಳು, ಕುರ್ಚಿಗಳು, ಮೇಜುಗಳು ಹಾಗೂ ಇತರೆ ಪೀಠೋಪಕರಣಗಳನ್ನು ಉತ್ಪಾದಿಸುವ ಉದ್ದಿಮೆಗಳಲ್ಲಿ ಉದ್ಯೋಗ | 415.12 | 515.12 | 10793 | 13393 |
| 73 | ಕಲ್ಲು ಒಡೆಯುವುದು ಮತ್ತು ಕಲ್ಲು ಪುಡಿ ಮಾಡುವ ಉದ್ದಿಮೆಗಳಲ್ಲಿ ಉದ್ಯೋಗ | 434.8 | 681.45 | 11305 | 17718 |
| 74 | ಚರ್ಮ ಹದ ಮಾಡುವ ಉದ್ದಿಮೆಗಳಲ್ಲಿ ಉದ್ಯೋಗ | 328.78 | 368.17 | 8548.4 | 9572.4 |
| 75 | ಬಟ್ಟೆಗಳ ತಯಾರಿಕೆ (ಗಾರ್ಮೆಂಟ್ಸ್), ವಸ್ತ್ರ ವಿನ್ಯಾಸ (ಕಾಸ್ಟ್ಯೂಮ್ಸ್) ಮತ್ತು ಟೈಲರಿಂಗ್ ಉದ್ದಿಮೆಗಳಲ್ಲಿ ಉದ್ಯೋಗ | 337.53 | 397.33 | 8775.9 | 10330 |
| 76 | ರೇಷ್ಮೆ ಬಟ್ಟೆಗಳ (ಸಿಲ್ಕ್) ಉದ್ದಿಮೆಗಳಲ್ಲಿ ಉದ್ಯೋಗ | 314.49 | 383.61 | 10475 | 11151 |
| 77 | ಹೆಂಚು ತಯಾರಿಕೆ ಉದ್ದಿಮೆಗಳಲ್ಲಿ ಉದ್ಯೋಗ | 434.8 | 681.45 | 11305 | 17718 |
| 78 | ಶೇಂದಿ ಇಳಿಸುವ ಉದ್ದಿಮೆಗಳಲ್ಲಿ ಉದ್ಯೋಗ | 434.8 | 681.45 | 11305 | 17718 |
| 79 | ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಉದ್ಯೋಗ | 450.12 | 627.82 | 11703 | 16323 |
| 80 | ಸಹಕಾರ ಸೊಸೈಟಿಗಳಲ್ಲಿ ಉದ್ಯೋಗ | 434.8 | 643.01 | 11305 | 16718 |

| | | | | | |
|---|---|---|---|---|---|
| 81 | ಚಿನ್ನ ಮತ್ತು ಬೆಳ್ಳಿ ಆಭರಣಗಳ ತಯಾರಿಕೆ ಮತ್ತು ಹರಳುಗಳು, ವಜ್ರಗಳನ್ನು ಕತ್ತರಿಸುವುದು, ಹೊಳಪು ಗೊಳಿಸುವ ಉದ್ದಿಮೆಗಳಲ್ಲಿ ಉದ್ಯೋಗ | 434.8 | 643.01 | 11305 | 16718 |
| 82 | ಬಟ್ಟೆಗಳಿಗೆ ಬಣ್ಣ ಹಾಕುವ (ಡೈ) ಮತ್ತು ಅಚ್ಚು ಹಾಕುವ (ಪ್ರಿಂಟ್) ಹಾಕುವ ಉದ್ದಿಮೆಗಳಲ್ಲಿ ಉದ್ಯೋಗ | 360.76 | 420.84 | 9379.8 | 10942 |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2967
ಮಾನ್ಯ ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್.(ಲಿಂಗಸುಗೂರು)
ಉತ್ತರಿಸುವ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿರುವ ಸರ್ಕಾರಿ ಪ್ರಾಥಮಿಕ ಶಾಲೆಗಳನ್ನು ಪ್ರೌಢಶಾಲೆಗಳನ್ನಾಗಿ ಉನ್ನತೀಕರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಉನ್ನತೀಕರಿಸಲು ವಾರ್ಷಿಕ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಎಂ.ಹೆಚ್.ಆರ್.ಡಿ ಯ ಈ ಕೆಳಕಂಡ ಮಾರ್ಗದರ್ಶನಗಳನ್ವಯ ಕ್ರಮವಹಿಸಿ ಪ್ರೌಢಶಾಲೆಗಳನ್ನಾಗಿ ಉನ್ನತೀಕರಿಸಲು ಕ್ರಮವಹಿಸಲಾಗಿದೆ.<br>1. 8ನೇ ತರಗತಿಯಲ್ಲಿ ವಿದ್ಯಾರ್ಥಿಗಳ ದಾಖಲಾತಿ 70 ಇರಬೇಕು. ಗುಡ್ಡಗಾಡು ಪ್ರದೇಶವಾದಲ್ಲಿ ಈ ದಾಖಲಾತಿಯು 25-30 ಇರಬೇಕು.<br>2. 5 ಕಿ.ಮೀ ವ್ಯಾಪ್ತಿಯಲ್ಲಿ ಸರ್ಕಾರಿ ಅನುದಾನಿತ ಅನುದಾನರಹಿತ ಶಾಲೆಗಳಿರಬಾರದು.<br>3. ಜಿ.ಐ.ಎಸ್. ಮ್ಯಾಪಿಂಗ್ ಇರಬೇಕು. |
| ಆ | ಲಿಂಗಸುಗೂರು ತಾಲ್ಲೂಕಿನ ಸರ್ಕಾರಿ ಪ್ರೌಢಶಾಲೆಗಳನ್ನು ಸರ್ಕಾರಿ ಪದವಿ-ಪೂರ್ವ ಕಾಲೇಜುಗಳನ್ನಾಗಿ ಉನ್ನತೀಕರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಬೈಯಾಪುರ, ಅನ್ವರಿ, ಚಿತ್ತಾಪುರ, ಗೌಡೂರು, ಸರ್ಕಾರಿ ಪ್ರೌಢಶಾಲೆಗಳನ್ನು ಉನ್ನತೀಕರಿಸಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಉನ್ನತೀಕರಿಸಲು ಪ್ರಸ್ತಾವನೆ ಇದ್ದು, ಸದರಿ ಶಾಲೆಗಳನ್ನು ಉನ್ನತೀಕರಿಸಲು ಕೆಳಕಂಡ ಮಾಹಿತಿಗಳನ್ನು ಕ್ರೋಢೀಕರಿಸಲಾಗುತ್ತಿದೆ.<br>1. ಉನ್ನತೀಕರಿಸಿರುವಂತಹ ಪ್ರದೇಶಗಳಲ್ಲಿ ಎಸ್.ಎಸ್.ಎಲ್.ಸಿ ಇಂದ ಪದವಿ ಪೂರ್ವ ಶಿಕ್ಷಣಕ್ಕೆ ಬರುವ ವಿದ್ಯಾರ್ಥಿಗಳ ಪ್ರತಿಶತ (average) ವಿವರಗಳು .<br>2. ಕೆ.ಪಿ.ಶಾಲೆಗಳಲ್ಲಿ ಈ ಕಾಲೇಜುಗಳನ್ನು ಉನ್ನತೀಕರಿಸಲು ಇರುವ ಅವಕಾಶದ ಬಗ್ಗೆ ಮಾಹಿತಿ.<br>3. ಪದವಿ ಪೂರ್ವ ಕಾಲೇಜಿನಲ್ಲಿ ವಿದ್ಯಾರ್ಥಿಗಳ ಗರಿಷ್ಠ/ಕನಿಷ್ಠ ಸಂಖ್ಯೆಯ ವಿವರ.<br>4. ಉಪನ್ಯಾಸಕರ ವಿವರಗಳ ಬಗ್ಗೆ ಸ್ಪಷ್ಟ ಸಂಖ್ಯೆಯ/ಮೊತ್ತದ ಮಾಹಿತಿ.<br>ಲಿಂಗಸೂಗೂರು ತಾಲ್ಲೂಕಿನ ಮಾವಿನಭಾವಿ ಸರ್ಕಾರಿ ಪ್ರೌಢಶಾಲೆಯನ್ನು ಸರ್ಕಾರಿ ಪದವಿ ಪೂರ್ವ ಕಾಲೇಜನ್ನಾಗಿ ಉನ್ನತೀಕರಿಸುವ ಪ್ರಸ್ತಾವನೆಯು ನಿರ್ದೇಶಕರು, ಪದವಿ ಪೂರ್ವ ಇವರ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
| ಇ | ಈ ಜಿಲ್ಲೆಯ ಲಿಂಗಸುಗೂರು ವಿಧಾನಸಭಾ ಕ್ಷೇತ್ರದಲ್ಲಿ ಬರುವ ಸರ್ಕಾರಿ ಪ್ರಾಥಮಿಕ, ಪ್ರೌಢಶಾಲೆ, ಹಾಗೂ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಮೂಲಭೂತ ಸೌಲಭ್ಯ ಒದಗಿಸಲು ಸರ್ಕಾರ ತೆಗೆದುಕೊಂಡ | ಲಿಂಗಸುಗೂರು ವಿಧಾನಸಭಾ ಕ್ಷೇತ್ರದಲ್ಲಿ ಬರುವ ಸರ್ಕಾರಿ ಪ್ರಾಥಮಿಕ, ಪ್ರೌಢಶಾಲೆ, ಹಾಗೂ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಎಸ್.ಡಿ.ಪಿ/ಕೆ.ಕೆ.ಆರ್.ಡಿ.ಬಿ/ಆರ್.ಐ.ಡಿ.ಎಫ್ ಮತ್ತು ಸಮಗ್ರ ಶಿಕ್ಷಣ ಕರ್ನಾಟಕ ಈ ಯೋಜನೆಗಳ ಅಡಿಯಲ್ಲಿ ಮೂಲಭೂತ ಸೌಲಭ್ಯಗಳನ್ನು |

| | | |
|---|---|---|
| | ಕ್ರಮಗಳೇನು; | ಒದಗಿಸಲಾಗುತ್ತಿದೆ. |
| ಈ | 2020-21ನೇ ಸಾಲಿನಲ್ಲಿ ಮಂಜೂರಾಗಿರುವ ಅನುದಾನವೆಷ್ಟು; | ರಾಜ್ಯದ ಮುಂದುವರೆದ ಯೋಜನೆ ಅಡಿಯಲ್ಲಿ<br>ಪ್ರಾಥಮಿಕ: 15.90 ಲಕ್ಷ (3 ಕೋಣೆಗಳಿಗೆ)<br>ಪ್ರೌಢ: 47.25 ಲಕ್ಷ (6 ಕೋಣೆಗಳಿಗೆ)<br>ಒಟ್ಟು: 63.15 ಲಕ್ಷಗಳ ಅನುದಾನ ಮಂಜೂರಾಗಿರುತ್ತದೆ. |
| ಉ | ರಾಜ್ಯದಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ವೇತನ ಹೆಚ್ಚಳ ಸೇರಿದಂತೆ ಇತರ ಸೌಲಭ್ಯಗಳನ್ನು ಒದಗಿಸಲು ಸರ್ಕಾರವು ತಗೆದುಕೊಂಡ ಕ್ರಮಗಳೇನು? | ಮಧ್ಯಾಹ್ನ ಉಪಹಾರ ಯೋಜನೆಯಡಿ ಕರ್ತವ್ಯ ನಿರ್ವಹಿಸುತ್ತಿರುವ ಮುಖ್ಯ ಅಡುಗೆಯವರ ಮಾಸಿಕ ಸಂಭಾವನೆಯನ್ನು ರೂ 6000/-ಕ್ಕೆ ಮತ್ತು ಸಹಾಯಕ ಅಡುಗೆಯವರ ಮಾಸಿಕ ಸಂಭಾವನೆಯನ್ನು ರೂ 5000/-ಕ್ಕೆ ಪರಿಷ್ಕರಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.<br><br>ಆದರೆ ಈಗಾಗಲೇ ರಾಜ್ಯ ಸರ್ಕಾರವು ತನ್ನ ಪಾಲಿಗಿಂತ ಹೆಚ್ಚುವರಿಯಾಗಿ ಮುಖ್ಯ ಅಡುಗೆಯವರಿಗೆ ರೂ 2100/- ಮತ್ತು ಸಹಾಯಕ ಅಡುಗೆಯವರಿಗೆ ರೂ.2000/-ಗಳನ್ನು ಪಾವತಿಸಲಾಗುತ್ತಿರುವುದರಿಂದ ಮತ್ತು ಕೇಂದ್ರ ಸರ್ಕಾರವು ತನ್ನ ಪಾಲಿನ ಸಂಭಾವನೆಯನ್ನು ಹೆಚ್ಚಿಳ ಮಾಡದ ಹೊರತು ರಾಜ್ಯ ಸರ್ಕಾರವು ಮತ್ತೊಮ್ಮೆ ಹೆಚ್ಚಳ ಮಾಡಲು ಸಾಧ್ಯವಿರುವುದಿಲ್ಲವೆಂದು ಹಾಗೂ ಪ್ರಸ್ತುತ ಕೋವಿಡ್-19 ಮಾಹಾಮಾರಿಯಿಂದಾಗಿ ರಾಜ್ಯ ಆರ್ಥಿಕ ಪರಿಸ್ಥಿತಿ ಆಶಾದಾಯಕವಾಗಿರದ ಕಾರಣ ಈ ಸಂದರ್ಭದಲ್ಲಿ ಅಡುಗೆ ಸಿಬ್ಬಂದಿಗಳ ಸಂಭಾವನೆಯನ್ನು ಪರಿಷ್ಕರಿಸುವ ಪ್ರಸ್ತಾವನೆಯನ್ನು ಪರಿಗಣಿಸಲು ಸಾಧ್ಯವಾಗುವುದಿಲ್ಲವೆಂದು ಆರ್ಥಿಕ ಇಲಾಖೆಯು ತಿಳಿಸಿರುತ್ತದೆ.<br><br>ಮುಖ್ಯ ಅಡುಗೆಯವರ ಮಾಸಿಕ ಸಂಭಾವನೆಯನ್ನ ರೂ 6000/-ಕ್ಕೆ ಹಾಗೂ ಸಹಾಯಕ ಅಡುಗೆಯವರ ಮಾಸಿಕ ಸಂಭಾವನೆಯನ್ನು ರೂ.5000/-ಕ್ಕೆ ಪರಿಷ್ಕರಿಸಿ ಅದಕ್ಕೆ ಅನುಗುಣವಾಗಿ ಕೇಂದ್ರ ಸರ್ಕಾರದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿ ಕೇಂದ್ರ ಸರ್ಕಾರದ ಶಿಕ್ಷಣ ಮಂತ್ರಾಲಯದ ಸಚಿವರಿಗೆ ಪತ್ರ ಬರೆಯಲಾಗಿದೆ.<br><br>18 ರಿಂದ 40 ವರ್ಷದೊಳಗಿನ ಎಲ್ಲಾ ಅಡುಗೆ ಸಿಬ್ಬಂದಿಗಳಿಗೆ ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ ಪಿಂಚಣಿ ಯೋಜನೆಯಡಿಯಲ್ಲಿ ನೋಂದಾಯಿಸಿಕೊಂಡ ಅಡುಗೆ ಸಿಬ್ಬಂದಿಗೆ 60 ವರ್ಷ ಪೂರ್ಣಗೊಂಡ ನಂತರ ಮಾಸಿಕ ರೂ 3000/-ಗಳ ಪಿಂಚಣಿ ಸೌಲಭ್ಯವನ್ನು ಪಡೆಯಲು ಅವಕಾಶವಿದ್ದು, ಈ |

| | | |
|---|---|---|
| | | ಶ್ರಮ್ ಯೋಗಿ ಮಾನ್-ಧನ್ ಪಿಂಚಣಿ ಯೋಜನೆಯಡಿಯಲ್ಲಿ ನೋಂದಾಯಿಸಿಕೊಂಡ ಅಡುಗೆ ಸಿಬ್ಬಂದಿಗೆ 60 ವರ್ಷ ಪೂರ್ಣಗೊಂಡ ನಂತರ ಮಾಸಿಕ ರೂ 3000/-ಗಳ ಪಿಂಚಣಿ ಸೌಲಭ್ಯವನ್ನು ಪಡೆಯಲು ಅವಕಾಶವಿದ್ದು, ಈ ಯೋಜನೆಯಡಿ ಅಡುಗೆ ಸಿಬ್ಬಂದಿಗಳನ್ನು ನೋಂದಾಯಿಸಲು ಕ್ರಮವಹಿಸಲಾಗಿದೆ.<br><br>ಅಡುಗೆ ಸಿಬ್ಬಂದಿಗಳಿಗೆ ಕರ್ತವ್ಯದ ಅವಧಿಯಲ್ಲಿ ಅಪಘಾತ/ಅವಘಡ ಸಂಭವಿಸಿದ್ದಲ್ಲಿ ಈ ಕೆಳಕಂಡಂತೆ ಪರಿಹಾರ ಒದಗಿಸಲಾಗುತ್ತದೆ.<br><br>• ಸರ್ಕಾರದ ಆದೇಶ ಸಂಖ್ಯೆ : ಇಡಿ 92 ಎಂ.ಎಂ.ಎಸ್ 2009, ದಿನಾಂಕ : 22.02.2010 (ಇಡಿ ಸ್ಕೀಮರ(ಯುನಿಕ್) 2010, ದಿನಾಂಕ : 22.02.2009) ರನ್ವಯ ಅಡುಗೆ ಸಿಬ್ಬಂದಿಯವರು ಅಡುಗೆ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಸುಟ್ಟಗಾಯಗಳಾಗಿದಲ್ಲಿ ರೂ.30,000/-, ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ಗರಿಷ್ಟ ರೂ.75,000/- ಮತ್ತು ಸುಟ್ಟಗಾಯಗಳಾಗಿ ಮರಣ ಹೊಂದಿದ ಸಂದರ್ಭದಲ್ಲಿ ರೂ.1,00,000/-ಗಳ ಪರಿಹಾರವನ್ನು ನೀಡಲಾಗುತ್ತಿದೆ.<br><br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವತಿಯಿಂದ ಅನುಷ್ಠಾನಗೊಂಡಿರುವ "ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ" ಯೋಜನೆಯಡಿ ಅಡುಗೆಯವರು ನೋಂದಾಯಿಸಿಕೊಂಡು ಹೆಲ್ತ್‌ಕಾರ್ಡ್ ಪಡೆದು ಉಚಿತ ಆರೋಗ್ಯ ಸೇವೆಗಳನ್ನು ಪಡೆಯಲು ಕ್ರಮವಹಿಸಲಾಗಿದೆ. |

ಇಪಿ 129 ಎಸ್ಇಎಸ್ 2021

**(ಎಸ್ ಸುರೇಶ್ ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2634
ಮಾನ್ಯ ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ (ನಾಗಮಂಗಲ)
ಉತ್ತರಿಸಬೇಕಾದ ದಿನಾಂಕ : 18-03-2021
ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ | ನಾಗಮಂಗಲ ವಿಧಾನಸಭಾ ವ್ಯಾಪ್ತಿಯಲ್ಲಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಆಸ್ಪತ್ರೆಗಳಿವೆ; ಇವುಗಳಿಗೆ ಮಂಜೂರಾದ ಹುದ್ದೆಗಳೆಷ್ಟು; ಎಷ್ಟು ಭರ್ತಿಯಾಗಿವೆ; ಎಷ್ಟು ಖಾಲಿ ಇವೆ; (ವೈದ್ಯರ ಸಮೇತ ವಿವರ ನೀಡುವುದು) | ನಾಗಮಂಗಲ ವಿಧಾನಸಭಾ ವ್ಯಾಪ್ತಿಯಲ್ಲಿ 19 ಪ್ರಾಥಮಿಕ ಆರೋಗ್ಯ ಕೇಂದ್ರ, ಒಂದು ಸಮುದಾಯ ಆರೋಗ್ಯ ಕೇಂದ್ರ ಹಾಗೂ ಒಂದು ತಾಲ್ಲೂಕು ಸಾರ್ವಜನಿಕ ಆಸ್ಪತ್ರೆಗಳು ಕಾರ್ಯನಿರ್ವಹಿಸುತ್ತಿವೆ.<br>ಇವುಗಳಲ್ಲಿ ಮಂಜೂರಾದ/ಭರ್ತಿಯಾದ ಹಾಗೂ ಖಾಲಿ ಇರುವ ಹುದ್ದೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |
| ಆ | ಎಷ್ಟು ವರ್ಷಗಳಿಂದ ಈ ಹುದ್ದೆಗಳು ಖಾಲಿ ಇವೆ; | ಕಾಲಕಾಲಕ್ಕೆ ವರ್ಗಾವಣೆ ಮತ್ತು ಪದೋನ್ನತಿಯಿಂದ ಖಾಲಿಯಾಗಿರುತ್ತದೆ. |
| ಇ | ಇದರಿಂದಾಗಿ ರೋಗಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ | ಬಂದಿದ್ದಲ್ಲಿ, ಖಾಲಿ ಹುದ್ದೆಗಳನ್ನು ಯಾವ ಕಾಲಮಿತಿಯೊಳಗಾಗಿ ಭರ್ತಿ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು? | ಇದಲ್ಲದೆ ಕಾಲಕಾಲಕ್ಕೆ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುತ್ತಿದೆ. ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ **ಅನುಬಂಧ-2** ರಲ್ಲಿ ಲಗತ್ತಿಸಿದೆ ಹಾಗೂ |

ಆಕುಕ 50 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ - 1

ನಾಗಮಂಗಲ ವಿಧಾನ ಸಭಾ ವ್ಯಾಪ್ತಿಯಲ್ಲಿ ಬರುವ ವೈದ್ಯಕೀಯ ಮತ್ತು ವೈದ್ಯೇತರ ಸಿಬ್ಬಂದಿಗಳ ಮಂಜೂರು, ಭರ್ತಿ ಮತ್ತು ಖಾಲಿ ಹುದ್ದೆಗಳ ವಿವರಗಳು

| ಕ್ರಮ ಸಂಖ್ಯೆ | ಆಸ್ಪತ್ರೆಯ ಹೆಸರು | ಮಂಜೂರು | ಭರ್ತಿ | ಖಾಲಿ |
|---|---|---|---|---|
| 1 | ತಾಲ್ಲೂಕು ಸಾರ್ವಜನಿಕ ಆಸ್ಪತ್ರೆ, ನಾಗಮಂಗಲ | 71 | 36 | 35 |
| 2 | ಸಮುದಾಯ ಆರೋಗ್ಯ ಕೇಂದ್ರ, ಬಿಂಡಿಗನವಿಲೆ | 45 | 20 | 25 |
| 3 | ಪ್ರಾ, ಆ. ಕೇಂದ್ರ ಬಿದರಕೋಟೆ | 3 | 1 | 2 |
| 4 | ಪ್ರಾ.ಆ.ಕೇಂದ್ರ ನವಿಲೆ | 6 | 2 | 4 |
| 5 | ಪ್ರಾ.ಆ.ಕೇಂದ್ರ ಬೆಕ್ಕಳಲೆ | 4 | 1 | 3 |
| 6 | ಪ್ರಾ.ಆ.ಕೇಂದ್ರ ಕೊಪ್ಪ | 13 | 5 | 8 |
| 7 | ಪ್ರಾ.ಆ.ಕೇಂದ್ರ ಕೌಡ್ಲೆ | 5 | 3 | 2 |
| 8 | ಪ್ರಾ.ಆ.ಕೇಂದ್ರ ಎಸಿಗಿರಿ | 18 | 9 | 9 |
| 9 | ಪ್ರಾ.ಆ.ಕೇಂದ್ರ ಬಿಳಗುಂದ | 7 | 3 | 4 |
| 10 | ಪ್ರಾ.ಆ.ಕೇಂದ್ರ ಕಾಳಿಂಗನಹಳ್ಳಿ | 5 | 3 | 2 |
| 11 | ಪ್ರಾ.ಆ.ಕೇಂದ್ರ ಗೊಂಡೇನಹಳ್ಳಿ | 6 | 1 | 5 |
| 12 | ಪ್ರಾ.ಆ.ಕೇಂದ್ರ, ಕ್ಲಲಗೆರೆ | 4 | 2 | 2 |
| 13 | ಪ್ರಾ.ಆ.ಕೇಂದ್ರ ಕದಬಹಳ್ಳಿ | 3 | 0 | 3 |
| 14 | ಪ್ರಾ.ಆ.ಕೇಂದ್ರ ಹೊನ್ನಾವರ | 5 | 2 | 3 |
| 15 | ಪ್ರಾ.ಆ.ಕೇಂದ್ರ ಹರದನಹಳ್ಳಿ | 25 | 10 | 15 |
| 16 | ಪ್ರಾ.ಆ.ಕೇಂದ್ರ ದೇವಲಾಪುರ | 18 | 8 | 10 |
| 17 | ಪ್ರಾ.ಆ.ಕೇಂದ್ರ ಜಿ ಬೊಮ್ಮನಹಳ್ಳಿ | 5 | 1 | 4 |
| 18 | ಪ್ರಾ.ಆ.ಕೇಂದ್ರ ದೊಡ್ಡಯಗಟಿ | 5 | 1 | 4 |
| 19 | ಪ್ರಾ.ಆ.ಕೇಂದ್ರ, ಚೀಣ್ಯ | 17 | 10 | 7 |
| 20 | ಪ್ರಾ.ಆ.ಕೇಂದ್ರ ಬ್ರಹ್ಮದೇವರಹಳ್ಳಿ | 5 | 3 | 2 |
| 21 | ಪ್ರಾ.ಆ.ಕೇಂದ್ರ ಬೋಗಾದಿ | 7 | 0 | 7 |
| | ಒಟ್ಟು | **206** | **85** | **121** |

ಅನುಬಂಧ- 2

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿಯಿಂದ ನೇರ ನೇಮಕಾತಿ ಮುಖಾಂತರ 1460 ತಜ್ಞ ವೈದ್ಯರುಗಳ ಹುದ್ದೆಗಳನ್ನು(636 ಬ್ಯಾಕ್‌ಲಾಗ್ ಒಳಗೊಂಡಂತೆ), 1265 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು(19 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಹಾಗೂ 90 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು (02 ಬ್ಯಾಕ್‌ಲಾಗ್ ಹುದ್ದೆಗಳು ಸೇರಿದಂತೆ) ಭರ್ತಿ ಮಾಡಲು ಈಗಾಗಲೇ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20, ದಿ:10.09.20 ನ್ನು ಹೊರಡಿಸಿ, ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಅಹ್ವಾನಿಸಲಾಗಿದ್ದು, ದಾಖಲೆಗಳ ಪರಿಶೀಲನೆ ಮುಗಿದಿರುತ್ತದೆ. ತಾತ್ಕಾಲಿಕ ಪಟ್ಟಿಯನ್ನು ಪ್ರಚುರಪಡಿಸುವ ಹಂತದಲ್ಲಿದೆ.

ಕಿರಿಯ ಆರೋಗ್ಯ ಸಹಾಯಕರು:

ಆಕುಕ ಇಲಾಖೆಯಲ್ಲಿ ಒಟ್ಟು 9850 ಕಿರಿಯ ಆರೋಗ್ಯ ಸಹಾಯಕ ಹುದ್ದೆಗಳು ಮಂಜೂರಾಗಿದ್ದು, ಖಾಲಿಯಿದ್ದ ಹುದ್ದೆಗಳ ಪೈಕಿ 2124 ಹುದ್ದೆಗಳನ್ನು 2018ನೇ ಸಾಲಿನಲ್ಲಿ ವಿಶೇಷ ನೇಮಕಾತಿ ನಿಯಮಗಳಡಿಯಲ್ಲಿ ಭರ್ತಿ ಮಾಡಲಾಗಿದ್ದು, ಒಟ್ಟಾರೆ 7123 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ 2727 ಹುದ್ದೆಗಳು ಖಾಲಿಯಿರುತ್ತವೆ.

ಶುಶ್ರೂಷಕರು:

ಆಕುಕ ಇಲಾಖೆಯಲ್ಲಿ ಒಟ್ಟು 8471 ಶುಶ್ರೂಷಕರ ಹುದ್ದೆಗಳು ಮಂಜೂರಾಗಿದ್ದು. ಖಾಲಿಯಿದ್ದ 4551 ಹುದ್ದೆಗಳ ಪೈಕಿ ಮೊದಲನೇ ಹಂತದಲ್ಲಿ 981 ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಜೊತೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಹೆಚ್‌ಎಫ್‌ಡಬ್ಲ್ಯೂ 550 ಹೆಚ್‌ಎಸ್‌ಹೆಚ್ 2016 ದಿನಾಂಕ 27.05.2017ರಲ್ಲಿ ಶುಶ್ರೂಷಕರು (ಡಿಪ್ಲಮೋ ನರ್ಸಿಂಗ್)- 889 ಹುದ್ದೆಗಳಿಗೆ ರಾಜ್ಯವಲಯದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ ಶುಶ್ರೂಷಕರುಗಳಿಗೆ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯಗಳನ್ನು ನೀಡಿ ಸರ್ಕಾರವು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ದಿನಾಂಕ:16.07.2020ರಲ್ಲಿ ಅಂತಿಮ ಆಯ್ಕೆಪಟ್ಟಿಯನ್ನು ಪ್ರಚುರ ಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ನೈಜತೆ ವರದಿಗಳು ಸ್ವೀಕೃತವಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಲಾಗಿರುತ್ತದೆ. ಪ್ರಸ್ತುತ 5790 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, 2681 ಹುದ್ದೆಗಳು ಖಾಲಿಯಿರುತ್ತವೆ. ಇದರ ಜೊತೆಗೆ 5778 ಶುಶ್ರೂಷಕರನ್ನು ಎನ್.ಹೆಚ್.ಎಂ. ಮುಖಾಂತರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿದೆ.

ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ:

ಆಕುಕ ಇಲಾಖೆಯಲ್ಲಿ 2932 ಫಾರ್ಮಾಸಿಸ್ಟ್ ಹುದ್ದೆಗಳು ಮಂಜೂರಾಗಿದ್ದು, 1974 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಹಾಗೂ 2411 ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳು ಮಂಜೂರಾಗಿದ್ದು, 1821 ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸರ್ಕಾರದ ಪತ್ರ ಸಂಖ್ಯೆ: ಆಕುಕ 709 ಹೆಚ್‌ಎಸ್‌ಎಂ* 2017, ದಿನಾಂಕ:03.08.2019ರಲ್ಲಿ ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ಫಾರ್ಮಾಸಿಸ್ಟ್, ಕ್ಷ-ಕಿರಣ ತಂತ್ರಜ್ಞರು ಹಾಗೂ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಗಳನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 843 ವೆಚ್ಚ-5/2018, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿ ಪ್ರಕಾರ ಈ ಕೆಳಕಂಡಂತೆ ಭರ್ತಿ ಮಾಡಲು ಅನುಮೋದನೆಯನ್ನು ನೀಡಿರುತ್ತಾರೆ.

| Sl. No | Designation | No. of Posts | | | | |
|---|---|---|---|---|---|---|
| | | 2019–20 | | 2020–21 | | Total |
| | | Regular | Outsource | Regular | Outsource | |
| 1. | Jr. Lab Technician | 150 | 150 | – | – | 300 |
| 2. | X-Ray Technician | 08 | – | – | – | 08 |
| 3. | Pharmacist | 200 | 200 | 200 | 200 | 800 |

ಸರ್ಕಾರದ ಆದೇಶದ ಪ್ರಕಾರ ಹೊರ ಗುತ್ತಿಗೆ ಆಧಾರದ ಮೇಲೆ 150 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು ಮತ್ತು 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಭರ್ತಿ ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಅಲ್ಲದೇ ಎನ್.ಹೆಚ್.ಎಂ. ಮುಖಾಂತರ 620 ಫಾರ್ಮಾಸಿಸ್ಟ್ ಹುದ್ದೆಗಳನ್ನು ಹಾಗೂ 1621 ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರನ್ನು ಗುತ್ತಿಗೆ ಆಧಾರದ ಮೇರೆಗೆ ನೇಮಕಾತಿ ಮಾಡಿಕೊಳ್ಳಲಾಗಿದೆ.

ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ 150 ಕಿರಿಯ ವೈದ್ಯಕೀಯ ಪ್ರಯೋಗ ಶಾಲಾ ತಂತ್ರಜ್ಞರು, 08 ಕ್ಷ-ಕಿರಣ ತಂತ್ರಜ್ಞರು ಹಾಗೂ 400 ಫಾರ್ಮಾಸಿಸ್ಟ್ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಕರ್ನಾಟಕ ಸಿವಿಲ್ ಸೇವೆಗಳ (ಸ್ಪರ್ಧಾತ್ಮಕ ಪರೀಕ್ಷೆಗಳು ಹಾಗೂ ಆಯ್ಕೆ ಮೂಲಕ ನೇಮಕಾತಿ (ಸಾಮಾನ್ಯ) ನಿಯಮಗಳು 2020ನ್ನು ರಚಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದ್ದು, ಸದರಿ ನಿಯಮಗಳು ಜಾರಿಗೆ ಬಂದ ನಂತರ ಆ ನಿಯಮಗಳನ್ವಯ ತುಂಬಲು ಪರಿಶೀಲಿಸಲಾಗುತ್ತಿದೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ಅರೆ ವೈದ್ಯಕೀಯ ಹುದ್ದೆಗಳನ್ನು (ಗ್ರೂಪ್ 'ಬಿ' ವೃಂದದ 10 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 283 ಹುದ್ದೆಗಳು) ಭರ್ತಿ ಮಾಡುವ ಸಂಬಂಧ ಕರ್ನಾಟಕ ಸಿವಿಲ್ ಸೇವೆಗಳ (ಸ್ಪರ್ಧಾತ್ಮಕ ಪರೀಕ್ಷೆಗಳು ಹಾಗೂ ಆಯ್ಕೆ ಮೂಲಕ ನೇಮಕಾತಿ (ಸಾಮಾನ್ಯ) ನಿಯಮಗಳು 2020ನ್ನು ರಚಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದ್ದು, ಸದರಿ ನಿಯಮಗಳು ಜಾರಿಗೆ ಬಂದ ನಂತರ ಆ ನಿಯಮಗಳನ್ವಯ ತುಂಬಲು ಪರಿಶೀಲಿಸಲಾಗುತ್ತದೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3012

ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು)

ಉತ್ತರಿಸಬೇಕಾದ ದಿನಾಂಕ : 18-03-2021.

ಉತ್ತರಿಸುವ ಸಚಿವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕವಿ ಮೊಗೇರಿ ಗೋಪಾಲಕೃಷ್ಣ ಅಡಿಗ ಇವರ ಹೆಸರಿನಲ್ಲಿ ಥೀಂಪಾರ್ಕ್ ಮಾದರಿಯಲ್ಲಿ ಸ್ಮಾರಕ ನಿರ್ಮಾಣಕ್ಕೆ ಸ್ಥಳ ಗುರುತಿಸಲಾಗಿದೆಯೇ; | ಇಲ್ಲ. |
| 2. | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆ ಈಗ ಯಾವ ಹಂತದಲ್ಲಿದೆ: | ಉದ್ಭವಿಸುವುದಿಲ್ಲ. |
| 3. | ಬೈಂದೂರು ವಿಧಾನಸಭಾ ಕ್ಷೇತ್ರವ್ಯಾಪ್ತಿಯಲ್ಲಿ ಕವಿ ಮೊಗೇರಿ ಗೋಪಾಲಕೃಷ್ಣ ಅಡಿಗ ಇವರ ಹೆಸರಿನಲ್ಲಿ ಥೀಂ ಪಾರ್ಕ್ ಮಾದರಿಯಲ್ಲಿ ಸ್ಮಾರಕ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಇಲ್ಲ. |
| 4. | ಹಾಗಿದ್ದಲ್ಲಿ, ಈ ಗ್ರಾಮದ ಸರ್ವೆ ನಂಬರ್ ವಿಸ್ತೀರ್ಣದೊಂದಿಗೆ ಸಂಪೂರ್ಣ ಮಾಹಿತಿ ಒದಗಿಸುವುದು? | ಉದ್ಭವಿಸುವುದಿಲ್ಲ. |

ಸಂಖ್ಯೆ: ಕಸಂವಾ 18 ಕವಿಸ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2980 |
| ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 18.03.2021. |
| ಉತ್ತರಿಸುವ ಸಚಿವರು | ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊರನಾಡು ಕನ್ನಡಿಗರಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಯಾವುದು; | **ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ:**<br>• ಹೊರನಾಡಿನಲ್ಲಿ ನೆಲೆಸಿರುವ ಕನ್ನಡ ಪರ ಸಂಘಗಳು ಏರ್ಪಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಸಹಾಯ ಧನವನ್ನು ನೀಡಲಾಗುತ್ತಿದೆ.<br>• ಹೊರನಾಡು ಕನ್ನಡಿಗರಿಗೆ ಇಲಾಖೆಯ ಪ್ರಾಯೋಜನೆ ಶಾಖೆಯಿಂದ ಹೊರನಾಡು ಪ್ರಾಯೋಜನೆ ನೀಡಲಾಗುತ್ತಿದೆ.<br><br>**ಕನ್ನಡ ಅಭಿವೃದ್ಧಿ ಪ್ರಾಧಿಕಾರ:**<br>• ಭಾರತ ದೇಶದ ಯಾವುದೇ ಭಾಗದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣದಲ್ಲಿ ಗಡಿನಾಡು/ಹೊರನಾಡು ಕನ್ನಡಿಗರ ಮೀಸಲಾತಿ ಅಡಿಯಲ್ಲಿ ಪ್ರವೇಶ ಪಡೆಯಲು ಅವಕಾಶ ಕಲ್ಪಿಸಿ ಆದೇಶ ಹೊರಡಿಸಲಾಗಿದೆ.<br>• ದೇಶದ ಯಾವುದೇ ಭಾಗದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡಿದ ಪ್ರತಿಯೊಬ್ಬರಿಗೂ ರಾಜ್ಯ ನಾಗರೀಕ ಸೇವಾ ಹುದ್ದೆಗಳ ನೇಮಕಾತಿಯಲ್ಲಿ (ಕ.ನಾ.ಸೇ. ನಿಯಮ 1977ರ ನಿಯಮ 9(1) (ಸಿ) ರಡಿಯಲ್ಲಿ ಶೇ.5ರಷ್ಟು ಸಮತಳ ಮೀಸಲಾತಿಯನ್ನು ಕಲ್ಪಿಸಲಾಗಿರುತ್ತದೆ.<br>• ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಹೊರರಾಜ್ಯಗಳಲ್ಲಿ ಕನ್ನಡ ಮಾಧ್ಯಮ ಶಿಕ್ಷಣವನ್ನು ಪ್ರೋತ್ಸಾಹಿಸಿ, ಹೊರರಾಜ್ಯಗಳಲ್ಲಿ ನೆಲೆಸಿರುವ ಕನ್ನಡಿಗರಿಗೆ ನೈತಿಕ ಬೆಂಬಲವನ್ನು ವ್ಯಕ್ತಪಡಿಸುವ ಸಲುವಾಗಿ ಮಹಾರಾಷ್ಟ್ರ, ತೆಲಂಗಾಣ, ಆಂಧ್ರ ಪ್ರದೇಶ, ತಮಿಳುನಾಡು, ಕೇರಳ ಹಾಗೂ ಗೋವಾ ರಾಜ್ಯಗಳಲ್ಲಿನ ಕನ್ನಡ ಮಾಧ್ಯಮ ಶಾಲೆ/ಕಾಲೇಜುಗಳಲ್ಲಿ ಎಸ್.ಎಸ್.ಎಲ್.ಸಿ ಮತ್ತು ಪಿಯುಸಿ ತರಗತಿಗಳನ್ನು ಕನ್ನಡ ಮಾಧ್ಯಮದಲ್ಲಿ ಅಭ್ಯಸಿಸಿ ಅತೀ ಹೆಚ್ಚು ಅಂಕ ಪಡೆದು ಶಾಲಾ/ಕಾಲೇಜು ಮಟ್ಟದಲ್ಲಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಸ್ಥಾನ ಪಡೆದ ವಿದ್ಯಾರ್ಥಿಗಳಿಗೆ ಕಳೆದ 09 ವರ್ಷಗಳಿಂದ ಕನ್ನಡ ಮಾಧ್ಯಮ ಪ್ರಶಸ್ತಿಯನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿದೆ ಅದೇ ರೀತಿ ಹೊರರಾಜ್ಯಗಳಲ್ಲಿರುವ 09 ಕನ್ನಡ ಅಧ್ಯಯನ ಪೀಠಗಳಲ್ಲಿ ಕನ್ನಡ ಎಂ.ಎ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ವಾರ್ಷಿಕ ರೂ.25,000/-ಗಳ ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ. |

....2

| | | |
|---|---|---|
| | | **ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ;**<br>ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಹೊರನಾಡು ಕನ್ನಡಿಗರಿಗೆ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>ಸಾಂಸ್ಕೃತಿಕ ಭವನ, ಬಯಲುರಂಗಮಂದಿರ, ಕಂಪ್ಯೂಟರ್ ಕೊಠಡಿ, ಗ್ರಂಥಾಲಯ ಕೊಠಡಿ, ಶಾಲಾ ಕೊಠಡಿ, ಕ್ರೀಡಾ ಕೊಠಡಿ, ಶಾಲಾ ಕಂಪೌಂಡ್/ಶೌಚಾಲಯ, ಆಟದ ಮೈದಾನ, ಇವುಗಳ ನಿರ್ಮಾಣಕ್ಕಾಗಿ ಹಾಗೂ ಕಂಪ್ಯೂಟರ್ ಖರೀದಿ, ರಸ್ತೆ ಸುಧಾರಣೆ, ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪನೆಗೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲು ಅನುದಾನ ನೀಡಲಾಗಿರುತ್ತದೆ. |
| ಆ) | ಹೊರ ರಾಜ್ಯದ ಎಷ್ಟು ಕನ್ನಡ ಸಂಘ-ಸಂಸ್ಥೆಗಳಿಗೆ ಯೋಜನಾ ಸೌಲಭ್ಯಗಳನ್ನು ಒದಗಿಸಿಕೊಡಲಾಗಿದೆ; | **ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ:**<br>ಹೊರನಾಡು ಸಂಘ-ಸಂಸ್ಥೆಗಳಿಗೆ ಕಳೆದ 03 ವರ್ಷಗಳ ಬಿಡುಗಡೆ ಮಾಡಿದ ವಿವರ:<br>(see table below)<br>**ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ:**<br>ಕಳೆದ 03 ವರ್ಷಗಳಲ್ಲಿ ಹೊರರಾಜ್ಯಗಳಲ್ಲಿ 91 ಕನ್ನಡ ಸಂಘ ಸಂಸ್ಥೆಗಳಿಗೆ ಯೋಜನಾ ಸೌಲಭ್ಯಗಳನ್ನು ಒದಗಿಸಲಾಗಿದೆ.<br>ಮಹಾರಾಷ್ಟ್ರ ರಾಜ್ಯ (ಜತ್ತ, ಸಾಂಗ್ಲಿ, ಅಕ್ಕಲಕೋಟ)-79<br>ಕೇರಳ ರಾಜ್ಯ (ಕಾಸರಗೋಡು)-11<br>ಆಂಧ್ರಪ್ರದೇಶ/ತೆಲಂಗಾಣ-1 |
| ಇ) | ಕೇರಳ ರಾಜ್ಯದ ಕಾಸರಗೋಡಿನ ಗಡಿನಾಡು ಭಾಗವನ್ನು ಸದರಿ ಯೋಜನೆಗಳಿಂದ ಹೊರತುಪಡಿಸಲಾಗಿದೆಯೇ; | ಇಲ್ಲ. |
| ಈ) | ಹೌದಾಲ್ಲಿ ಕಾರಣಗಳೇನು; | ಪ್ರಶ್ನೆ ಉದ್ಭವಿಸುವುದಿಲ್ಲ. |
| ಉ) | ಹೊರ ರಾಜ್ಯದ ಗಡಿಪ್ರದೇಶಗಳಲ್ಲಿರುವ ಕನ್ನಡಿಗರಿಗೆ ಒದಗಿಸಿಕೊಡಲಾಗುತ್ತಿರುವ ವಿವಿಧ ಸೌಕರ್ಯ/ಸೌಲಭ್ಯಗಳು ಹಾಗೂ ಮೀಸಲಾತಿ ಸೌಲಭ್ಯಗಳ ವಿವರಗಳೇನು? | • ಹೊರ ರಾಜ್ಯದ ಗಡಿಪ್ರದೇಶಗಳಲ್ಲಿರುವ ಕನ್ನಡಿಗರಿಗೆ ಒದಗಿಸಿಕೊಡಲಾಗುತ್ತಿರುವ ವಿವಿಧ ಸೌಕರ್ಯ/ಸೌಲಭ್ಯಗಳನ್ನು ಉಪ ಪ್ರಶ್ನೆ 'ಅ' ರಲ್ಲಿ ವಿವರಿಸಲಾಗಿದೆ.<br>• ಮೀಸಲಾತಿ ಸೌಲಭ್ಯಗಳು ಅನ್ವಯಿಸುವುದಿಲ್ಲ. |

| ಕ್ರ. ಸಂ. | ವರ್ಷ | ಸಂಸ್ಥೆಗಳ ಸಂಖ್ಯೆ |
|---|---|---|
| 1 | 2017-18 | 15 |
| 2 | 2018-19 | 12 |
| 3 | 2019-20 | ಇಲಾಖೆಯ ಕ್ರಿಯಾ ಯೋಜನೆಯಲ್ಲಿ ಅನುದಾನ ಕಲ್ಪಿಸಿರುವುದಿಲ್ಲ. |

ಸಂಖ್ಯೆ: ಕಸಂವಾ 24 ಕವಿಸ 2021.

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2776
ಸದಸ್ಯರ ಹೆಸರು : ಶ್ರೀ ಪರಮೇಶ್ವರ ನಾಯಕ್ ಪಿ.ಟಿ (ಹಡಗಲಿ)
ಉತ್ತರಿಸಬೇಕಾದ ದಿನಾಂಕ : 18-03-2021
ಉತ್ತರಿಸುವ ಸಚಿವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಂಗಳವಾದ್ಯ ಕಲೆಯನ್ನು ಪ್ರೋತ್ಸಾಹಿಸಲು ಹಾಗೂ ಮಂಗಳವಾದ್ಯ ಕಲಾವಿದರ ಜೀವನ ಮಟ್ಟ ಸುಧಾರಣೆಗೆ ಸರ್ಕಾರವು ಕೈಗೊಂಡ ಕ್ರಮಗಳೇನು; | ಕಷ್ಟ ಪರಿಸ್ಥಿತಿಯಲ್ಲಿರುವ ಮಂಗಳವಾದ್ಯ ಕಲಾವಿದರ ಜೀವನ ಸುಧಾರಣೆಗೆ ಸರ್ಕಾರವು ಮಾಹೆಯಾನ ರೂ. 2000/- ಗಳಂತೆ ಮಾಸಾಶನ ಪಾವತಿಸಲಾಗುತ್ತಿದೆ. |
| ಆ | ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಮಂಗಳವಾದ್ಯ ಕಲಾವಿದರ ಸೇವೆಯನ್ನು ಪಡೆಯುವುದು ಇತ್ತೀಚೆಗೆ ತುಂಬಾ ಕಡಿಮೆ ಆಗುತ್ತಿದ್ದು, ಅವಸಾನದಂಚಿಗೆ ಹೋಗುತ್ತಿರುವ ಈ ಕಲೆಯನ್ನು ಉಳಿಸಿ ಬೆಳೆಸಲು ಸರ್ಕಾರವು ಯಾವುದಾದರೂ ಯೋಜನೆಗಳನ್ನು ರೂಪಿಸಿದೆಯೇ; | ಇಲಾಖೆಯ ನಿಯಮಾವಳಿ ಪ್ರಕಾರ ಮಂಗಳವಾದ್ಯ ಕಲಾವಿದರಿಗೆ ಗುರುತಿಸಿ ಕಾರ್ಯಕ್ರಮಗಳನ್ನು ನೀಡಿ ಅವಕಾಶವನ್ನು ಕಲ್ಪಿಸಲಾಗುತ್ತಿದ್ದು ಹಾಗೂ ಗುರುಶಿಷ್ಯ ಪರಂಪರೆ ಯೋಜನೆಯಡಿ ಯುವ ಕಲಾವಿದರಿಗೆ ತರಬೇತಿ ನೀಡಿ ಕಲೆಯನ್ನು ಉಳಿಸಿ ಬೆಳೆಸಲು ಕ್ರಮವಹಿಸಲಾಗುತ್ತಿದೆ. |
| ಇ | ಮಂಗಳವಾದ್ಯ ಕಲಾವಿದರು ದುಡಿಮೆಯಿಲ್ಲದೆ ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇವರಿಗೆ ಮಾಸಾಶನ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ಮಂಗಳವಾದ್ಯ ಕಲಾವಿದರ ಜೀವನ ಸುಧಾರಣೆಗೆ ಸಂಬಂಧಿಸಿದಂತೆ 58 ವರ್ಷ ಮೇಲ್ಪಟ್ಟ ಕಲಾವಿದರಿಗೆ ಮಾಹೆಯಾನ ರೂ. 2000/- ಗಳಂತೆ ಮಾಸಾಶನ ಪಾವತಿಸಲಾಗುತ್ತಿದೆ. |
| ಈ | ಇಲ್ಲದಿದ್ದಲ್ಲಿ, ಕಲಾವಿದರ ಜೀವನ ಮಟ್ಟ ಸುಧಾರಣೆಗೆ ಮಾಸಾಶನ ನೀಡುವಲ್ಲಿನ ಸರ್ಕಾರದ ನಿಲುವೇನು? | ಪ್ರಶ್ನೆ ಉದ್ಭವಿಸುವುದಿಲ್ಲ |

ಕಡತ ಸಂಖ್ಯೆ: ಕಸಂವಾ 20 ಕವಿಸ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2644
ಸದಸ್ಯರ ಹೆಸರು : ಶ್ರೀ ಅಜಯ್ ಧರ್ಮಸಿಂಗ್ ಡಾ|| (ಜೇವರ್ಗಿ)
ಉತ್ತರಿಸಬೇಕಾದ ದಿನಾಂಕ : 18-03-2021
ಉತ್ತರಿಸುವ ಸಚಿವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಚಿತ್ತರಗಿ ಶ್ರೀ ವಿಜಯ ಮಹಂತೇಶ ಸಂಸ್ಥಾನದ ಮಠಾಧಿಪತಿ ಲಿಂ.ಶ್ರೀ ಮ.ನಿ.ಪ್ರ. ಡಾ: ಮಹಂತ ಸ್ವಾಮಿಗಳವರ ಹುಟ್ಟುಹಬ್ಬವನ್ನು ಪ್ರತಿವರ್ಷ ಆಗಸ್ಟ್-1 ರಂದು ರಾಜ್ಯಾದ್ಯಂತ ವ್ಯಸನಮುಕ್ತ ದಿನಾಚರಣೆಯನ್ನಾಗಿ ಆಚರಣೆ ಮಾಡಲು 2017 ರಿಂದ ಜಾರಿಗೆ ಬರುವಂತೆ ಆದೇಶವಾಗಿದ್ದು, ಅದರಂತೆ 2017 ಹಾಗೂ 2018ನೇ ಸಾಲಿನಲ್ಲಿ ಆಚರಿಸಲಾಗಿದ್ದು, 2018ನೇ ಸಾಲಿನಲ್ಲಿ ರೂ. 69.00 ಲಕ್ಷಗಳ ಅನುದಾನ ಬಿಡುಗಡೆಯೊಂದಿಗೆ ಆಚರಣೆ ಮಾಡಲು ಆದೇಶವಾಗಿದ್ದರೂ ಸಹ 2019-20ನೇ ಸಾಲಿನಿಂದ ಆಚರಣೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | • ಸರ್ಕಾರಿ ಆದೇಶ ಸಂಖ್ಯೆ: ಆಕುಕ 70 ಪಿಐಎಂ 2017, ದಿನಾಂಕ: 19.07.2017 ರ ಆದೇಶದಲ್ಲಿ ರಾಜ್ಯಾದ್ಯಂತ ಆಗಸ್ಟ್ 01 ರಂದು ಡಾ.ಮಹಂತಸ್ವಾಮಿಗಳ ಹುಟ್ಟುಹಬ್ಬವನ್ನು'ವ್ಯಸನಮುಕ್ತ ದಿನಾಚರಣೆ'ಯನ್ನಾಗಿ ಆಚರಿಸಲು ಅನುಮತಿ ನೀಡಿ ಆದೇಶಿಸಲಾಗಿರುತ್ತದೆ.<br>• ಸರ್ಕಾರದ ಆದೇಶ ಸಂಖ್ಯೆ : ಕಸಂಪಾ 271 ಕಸಧ 2018, ದಿನಾಂಕ: 30.07.2018 ರ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವತಿಯಿಂದ ದಿನಾಂಕ: 01.08.2018 ರಂದು 'ವ್ಯಸನ ಮುಕ್ತ ದಿನಾಚರಣೆ'ಯನ್ನು ಕೇಂದ್ರ, ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಆಚರಿಸುವಂತೆಯೂ, ಇದಕ್ಕೆ ತಗಲುವ ಒಟ್ಟು ವೆಚ್ಚ ರೂ69.00ಲಕ್ಷ (ರೂಪಾಯಿ ಅರವತ್ತೊಂಭತ್ತು ಲಕ್ಷ ಮಾತ್ರ)ಗಳನ್ನು ಇಲಾಖಾ ಮುಖಾಂತರ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರಿಗೆ ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.<br>• ಬಿಡುಗಡೆ ಮಾಡಿದ ರೂ. 69.00 ಲಕ್ಷಗಳನ್ನು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಆನಂದರಾವ್ ವೃತ್ತ, ಬೆಂಗಳೂರು ಇವರಿಗೆ ದಿನಾಂಕ: 31.07.2018 ರಲ್ಲಿ ಪತ್ರ ಬರೆದು ಕೆ2 ಡಿಡಿಓ ಕೋಡ್ ಹಣ ಅಪ್ ಲೋಡ್ ಮಾಡಲಾಗುವುದು, ತಮ್ಮ ಇಲಾಖೆಗೆ ಸಂಬಂಧಿಸಿದ ಕೆ-2 ಡಿಡಿಓ ಸಂಖ್ಯೆ ನೀಡುವುದು ಹಾಗೂ ದಿನಾಂಕ: 01.08.2018ರಂದು "ವ್ಯಸನ ಮುಕ್ತ ದಿನಾಚರಣೆಯನ್ನು" ಆಚರಿಸಲು ತುರ್ತು ಕ್ರಮ ಕೈಗೊಳ್ಳಲು ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರಿಗೆ ಪತ್ರ ಬರೆಯಲಾಗಿರುತ್ತದೆ.<br>• ಸದರಿ ವಿಷಯ ಕುರಿತು ತಮ್ಮ ಇಲಾಖೆಗೆ ಸಂಬಂಧಿಸಿದ ಕೆ-2 ಡಿಡಿಓ ಸಂಖ್ಯೆ ನೀಡುವುದು ಹಾಗೂ ದಿನಾಂಕ: 01.08.2019ರಂದು "ವ್ಯಸನ ಮುಕ್ತ ದಿನಾಚರಣೆಯನ್ನು" ಆಚರಿಸಲು ತುರ್ತು ಕ್ರಮ ಕೈಗೊಳ್ಳಲು ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರಿಗೆ ದಿನಾಂಕ: 15.06.2019 ರಂದು ಮತ್ತೊಮ್ಮೆ ಪತ್ರ ಬರೆಯಲಾಗಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಕ್ರಮ ಕೈಗೊಂಡ ಬಗ್ಗೆ ಇಲಾಖೆಯು ಯಾವುದೇ ಮಾಹಿತಿ ನೀಡಿರುವುದಿಲ್ಲ. |

| | | |
|---|---|---|
| | | • ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 390 ವೆಚ್ಚ-7/2020ರಲ್ಲಿ "ಆಗಸ್ಟ 01 ರಂದು ವ್ಯಸನ ಮುಕ್ತ ದಿನಾಚರಣೆಯನ್ನು ಆಚರಿಸಲು ದಿನಾಂಕ:19-07-2017ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆದೇಶದಲ್ಲಿ ಅನುಮತಿ ನೀಡಿರುವುದಿಂದ ಈ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ತಿಳಿಸಿ ಸದರಿ ಇಲಾಖೆಯಿಂದಲೇ ಆಚರಿಸುವಂತೆ ಅಥವಾ 2020-21ನೇ ಸಾಲಿನ ಆಗಸ್ಟ 01ನೇ ದಿನಾಂಕ ಈಗಾಗಲೇ ಮುಗಿದಿರುವುದರಿಂದ ಮುಂದಿನ ಆರ್ಥಿಕ ವರ್ಷದಲ್ಲಿ ಆಡಳಿತ ಇಲಾಖೆಯೇ ಈ ಬಗ್ಗೆ ಸೂಕ್ತ ನಿರ್ಧಾರ ತೆಗೆದುಕೊಳ್ಳುವಂತೆ ತಿಳಿಸಿದೆ".<br>• ಆರ್ಥಿಕ ಇಲಾಖೆಯ ಸೂಚನೆಯಂತೆ ವ್ಯಸನ ಮುಕ್ತ ದಿನಾಚರಣೆ ಆಚರಿಸಲು ಕ್ರಮವಹಿಸಲಾಗುವುದು. |
| ಆ) | ಬಂದಿದ್ದಲ್ಲಿ, ಕಳೆದ ಎರಡು ವರ್ಷಗಳಿಂದ ಆಚರಣೆ ಮಾಡದೆ ಇರಲು ಕಾರಣಗಳೇನು; | • ಆಗಸ್ಟ – 1 ರಂದು 'ವ್ಯಸನಮುಕ್ತ ದಿನಾಚರಣೆ'ಯನ್ನು ಆಚರಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಆದೇಶ ಹೊರಡಿಸಲಾಗಿದೆ.<br>• ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ 2018-19ನೇ ಸಾಲಿನಲ್ಲಿ 'ವ್ಯಸನಮುಕ್ತ ದಿನಾಚರಣೆ'ಯನ್ನು ಆಚರಿಸಲು ರೂ. 69.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ.<br>• ಬಿಡುಗಡೆಯಾದ ರೂ. 69.00 ಲಕ್ಷಗಳನ್ನು ಆರೋಗ್ಯ ಇಲಾಖೆಗೆ ಕೆ-2 ಮೂಲಕ ಬಿಡುಗಡೆ ಮಾಡಲು ದಿನಾಂಕ: 31.07.2018 ಮತ್ತು 15.06.2019 ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇವರಿಗೆ ಪತ್ರ ಬರೆಯಲಾಗಿದೆ. ಆದರೆ, ಇದುವರೆಗೂ ಯಾವುದೇ ಮಾಹಿತಿ ಬಂದಿರುವುದಿಲ್ಲ. |
| (ಇ) | ಈ ಬಗ್ಗೆ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕೈಗೊಂಡ ಕ್ರಮಗಳೇನು: | ಪ್ರಶ್ನೆ ಉದ್ಭವಿಸುವುದಿಲ್ಲ |
| (ಈ) | 2021-22ನೇ ಸಾಲಿನಿಂದ ಪ್ರತಿವರ್ಷ ಈ ಕಾರ್ಯಕ್ರಮವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಉದ್ದೇಶ ಸರ್ಕಾರಕ್ಕಿದೆಯೇ? (ಸಂಪೂರ್ಣ ವರದಿ ನೀಡುವುದು) | ಪ್ರಸಕ್ತ ಸಾಲಿನಿಂದ ಕಟ್ಟುನಿಟ್ಟಾಗಿ ಪಾಲಿಸಲು ಅಗತ್ಯ ಕ್ರಮವಹಿಸಲಾಗುವುದು. |

ಕಡತ ಸಂಖ್ಯೆ: ಕಸಂವಾ 22 ಕವಿಸ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ವಿಧಾನಸಭೆ

15ನೇ ವಿಧಾನ ಸಭೆ

9ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1579

ಮಾನ್ಯ ಸದಸ್ಯರ ಹೆಸರು: ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ)

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

ಉತ್ತರಿಸಬೇಕಾದ ದಿನಾಂಕ: 18-03-2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮಹಿಳಾ ಪ್ರಥಮ ದರ್ಜೆ ಕಾಲೇಜುಗಳನ್ನು ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸಲು ತೀರ್ಮಾನಿಸಲಾಗಿದೆಯೇ; | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014ರನ್ವಯ ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಲಾಗಿರುತ್ತದೆ.<br><br>ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನದ ಪಿಎಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014ರ ಪ್ರಾರಂಭದ ದಿನಾಂಕದ ಮೊದಲು ಇತರ ಎಲ್ಲಾ ವಿಶ್ವವಿದ್ಯಾಲಯಗಳ ಯಾವುದೇ ವಿಶೇಷಾಧಿಕಾರ ಅಥವಾ ಸಂಯೋಜನೆಗೊಳಪಟ್ಟ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಸಂಯೋಜನೆಗೊಳಪಡುತ್ತವೆ. **(ಅಧಿನಿಯಮದ ಪ್ರತಿ ಲಗತ್ತಿಸಿದೆ).** |
| ಆ) | ಹೌದಾದಲ್ಲಿ, ಸಾಗರದ ಶ್ರೀಮತಿ ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರವು ಸುಮಾರು 400 ಕಿ.ಮೀ. ದೂರವಿದ್ದು, ಅಲ್ಲಿನ ವಿದ್ಯಾರ್ಥಿಗಳು ಅಂಕಪಟ್ಟಿ, ಪದವಿ ಪ್ರಮಾಣ ಪತ್ರಗಳನ್ನು ತುರ್ತಾಗಿ ಪಡೆಯಲು ಸಾಧ್ಯವಾಗದಿರುವುದು ಮತ್ತು ಅನಾವಶ್ಯಕ ಆರ್ಥಿಕ ಹೊರೆಯನ್ನು ಹೊರಬೇಕಾಗಿರುವುದನ್ನು ಸರ್ಕಾರ ಗಮನಿಸಿದೆಯೇ; | ರಾಜ್ಯದ ಮಹಿಳೆಯರು ಕಲಿಕೆ ಮುಂದುವರೆಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆ ನಡೆಸುವುದರ ಪುರೋಭಿವೃದ್ಧಿಗಾಗಿ ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಿ ಜಾರಿಗೆ ತರಲಾಗಿರುವ ಕಾನೂನನ್ನು ಪಾಲಿಸುವುದು ಕಡ್ಡಾಯವಾಗುತ್ತದೆ.<br><br>ಈ ವಿಸ್ತರಣೆಯ ಧ್ಯೇಯೋದ್ದೇಶಗಳನ್ನು ಪರಿಗಣಿಸಿದಲ್ಲಿ ಉಳಿದ ವಿಷಯಗಳು ಗೌಣವಾಗುತ್ತವೆ. |

-2

| | | |
|---|---|---|
| ಇ) | ಹಾಗಿದ್ದಲ್ಲಿ, ರಾಜ್ಯದಲ್ಲಿ ಮಹಿಳಾ ಪ್ರಥಮ ದರ್ಜೆ ಕಾಲೇಜುಗಳನ್ನು ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸದಿರುವುದನ್ನು ಕೈಬಿಡಲು ಸರ್ಕಾರ ಕೈಗೊಂಡ ಕ್ರಮಗಳೇನು?(ವಿವರ ಒದಗಿಸುವುದು). | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014ರನ್ವಯ ರಾಜ್ಯದ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಳ್ಳುವುದು ಅನಿವಾರ್ಯ ಹಾಗೂ ಕಡ್ಡಾಯವಾಗುತ್ತದೆ.<br><br>ಪ್ರಸ್ತುತ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯವನ್ನು ವಿಜಯಪುರ ಜಿಲ್ಲೆಯ ಒಂದು ಸಾಮಾನ್ಯ ವಿಶ್ವವಿದ್ಯಾಲಯವನ್ನಾಗಿ ಪರಿವರ್ತಿಸುವ ಸಂಬಂಧದಲ್ಲಿ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ವಿಧೇಯಕ, 2021ನ್ನು ರಚಿಸಿ ಶಾಸನಾತ್ಮಕ ಪ್ರಕ್ರಿಯೆಯನ್ನು ಕೈಗೊಳ್ಳಲಾಗುತ್ತಿದೆ.<br><br>ಪ್ರಸ್ತಾವಿತ, ವಿಧೇಯಕವು ಜಾರಿಯಾದ ಮೇಲೆ ರಾಜ್ಯದಲ್ಲಿನ ಮಹಿಳಾ ಪದವಿ ಕಾಲೇಜುಗಳು ಆಯಾ ವಿಶ್ವವಿದ್ಯಾಲಯಗಳಿಗೆ ಸಂಯೋಜನೆಗೊಳ್ಳುತ್ತವೆ. |

ಸಂಖ್ಯೆ: ಇಡಿ/34/ಎಂವಿವಿ/2021

(ಡಾ॥ ಅಶ್ವಥ್‌ನಾರಾಯಣ ಸಿ.ಎನ್)

ಉಪ ಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

1223191/2020



ಕರ್ನಾಟಕ ಸರ್ಕಾರ

ಕ್ರಮಾಂಕ: ಇಡಿ 111 ಎಂವಿವಿ 2017

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 30-11-2018

## ತಿದ್ದುಪಡಿ ಅಧಿಸೂಚನೆ

ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಲಾದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014 ಜಾರಿಗೆ ಬರುವ ದಿನಾಂಕವನ್ನು ಅಧಿಸೂಚಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 77 ಎಂವಿವಿ 2013, ದಿನಾಂಕ: 22-06-2016ರಲ್ಲಿ ಕಂಡು ಬರುವ **"24ನೇ ಮಾರ್ಚ್ 2015ರಿಂದ"** ಎಂಬ ಪದಗಳನ್ನು **"22ನೇ ಜೂನ್ 2016ರಿಂದ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

30/11/18
(ಎಂ.ಎ. ಅಹಮದ್ ಜಾನ್)
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2)

30/11/18

ಇವರಿಗೆ
ಸಂಕಲನಕಾರರು ಕರ್ನಾಟಕ ರಾಜ್ಯಪತ್ರ ಬೆಂಗಳೂರು - ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:-
1) ಮಾನ್ಯ ರಾಜ್ಯಪಾಲರು ಹಾಗೂ ವಿಶ್ವವಿದ್ಯಾಲಯಗಳ ಕುಲಾಧಿಪತಿಗಳ ಆಪ್ತ ಕಾರ್ಯದರ್ಶಿಗಳು, ರಾಜ ಭವನ ಬೆಂಗಳೂರು.
2) ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು ವಿಧಾನಸೌಧ ಬೆಂಗಳೂರು.
3) ಮಾನ್ಯ ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು. ವಿಧಾನ ಸೌಧ, ಬೆಂಗಳೂರು.
4) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಕುಲಪತಿಗಳು/ಕುಲಸಚಿವರು.
5) ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ,
6) ಶಾಖಾ ರಕ್ಷಾ ಕಡತ.

ಅಧಿಕಾರಿಯನ್ನಾಗಿ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿಯ ನಿರ್ಣಯದಿಂದ ಬಾಧಿತರಾದಂತಹ ಯಾವುದೇ ವ್ಯಕ್ತಿಯು ಮೇಲ್ಮನವಿ ಸಲ್ಲಿಸಲು ಆಯಾ ನಗರ ಯೋಜನಾ ಪ್ರಾಧಿಕಾರದ ವ್ಯಾಪ್ತಿಯ ಉಪ ವಿಭಾಗಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR – 815

ನಾಗರಾಜ

SC – 25

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 32 ಬೆಂರೂಪ್ರಾ 2017, ಬೆಂಗಳೂರು, ದಿನಾಂಕ: 10.02.2017.**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(3)(ಎ) ಮತ್ತು (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆತಾಉಲ್ಲಾ ಖಾನ್ ಬಿನ್ ಶ್ರೀ ಅಬ್ದುಲ್ ರಹೀಮ್ ಖಾನ್, ಹವೇಲಿ ಮೊಹಲ್ಲಾ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR – 816

ನಾಗರಾಜ

SC – 25

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 77 ಎಂವಿವಿ 2013, ಬೆಂಗಳೂರು, ದಿನಾಂಕ: 22.06.2016.**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014 ಪ್ರಕರಣ 1(2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸುವ ಸಂಬಂಧದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014ನ್ನು ಮಾನ್ಯ ರಾಜ್ಯಪಾಲರು ಅನುಮೋದಿಸಿದ ದಿನಾಂಕದಿಂದ ಅಂದರೆ 24ನೇ ಮಾರ್ಚ್ 2015ರಿಂದ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR – 823

ಕೆ.ಎಲ್.ಸುಬ್ರಮಣ್ಯ

SC – 100

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು–2).

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆರ್‌ಡಿ 03 ಎಲ್‌ಜಿಎ್ಯ 2017, ಬೆಂಗಳೂರು, ದಿನಾಂಕ: 10.03.2017.**

ನಾಗಮಂಗಲ ವಿಧಾನಸಭಾ ಕ್ಷೇತ್ರದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 10 ಎಲ್‌ಜಿಎ್ಯ 2014, ದಿನಾಂಕ: 13.02.2014ರಲ್ಲಿ ರಚಿಸಿದ್ದು, ಸದರಿ ಅಧಿಸೂಚನೆಯ ಕ್ರಮ ಸಂಖ್ಯೆ: 2 ರಲ್ಲಿರುವ ಶ್ರೀ ಎಸ್.ಕೆ.ನಾಗೇಶ ಬಿನ್ ಕೆಂಪಯ್ಯ, ಟಿ.ಬಿ.ಬಡಾವಣೆ, ನಾಗಮಂಗಲ (ಸದಸ್ಯರು ಸಾಮಾನ್ಯ) ಇವರ ನಾಮನಿರ್ದೇಶನವನ್ನು ಹಿಂಪಡೆದು ಅವರ ಸ್ಥಳದಲ್ಲಿ ಶ್ರೀ ಎಸ್.ಎಂ.ರಾಮಸ್ವಾಮಿಗೌಡ ಬಿನ್ ಶ್ರೀ ಮೇಲಗಿರಿಗೌಡ ಎ.ನಾಗತಿಹಳ್ಳಿ, ಆಳೀಸಂದ್ರ ಅಂಚೆ, ನಾಗಮಂಗಲ ತಾಲ್ಲೂಕ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR – 827

ಉದಯ್ ಆರ್.ನಾಯಕ್

SC – 25

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ.–2).

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 37 ಸಿಎಸ್‌ಎಸ್ 2017, ಬೆಂಗಳೂರು, ದಿನಾಂಕ: 21.03.2017.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 28ಎ ಉಪ ಪ್ರಕರಣ (4ಬಿ)(1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಣ್ಣೂರು ಗ್ರಾಮ, ಚಾಮರಾಜನಗರ ಜಿಲ್ಲೆ ಇದರ ಆಡಳಿತ ಮಂಡಳಿಗೆ

ಕ್ರಮಾಂಕ: ಇಡಿ [illegible] 2015

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 22-6-2016

## ಅಧಿಸೂಚನೆ

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014 ಪ್ರಕರಣ 1(2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸುವ ಸಂಬಂಧದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014ನ್ನು ಮಾನ್ಯ ರಾಜ್ಯಪಾಲರು ಅನುಮೋದಿಸಿದ ದಿನಾಂಕದಿಂದ ಅಂದರೆ 24ನೇ ಮಾರ್ಚ್ 2015ರಿಂದ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

(ಕೆ.ಎಲ್.ಸುಬ್ರಮಣ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2)

ಇವರಿಗೆ

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು – ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:-

1. ಮಾನ್ಯ ರಾಜ್ಯಪಾಲರು ಹಾಗೂ ವಿಶ್ವವಿದ್ಯಾಲಯಗಳ ಕುಲಾಧಿಪತಿಗಳ ಆಪ್ತ ಕಾರ್ಯದರ್ಶಿಗಳು, ರಾಜ ಭವನ, ಬೆಂಗಳೂರು.
2. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು.
4. ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಕುಲಪತಿಗಳು/ಕುಲಸಚಿವರು.
5. ಶಾಖಾ ರಕ್ಷಾ ಕಡತ.

(5)



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೨೮, ೨೦೧೫ (ಚೈತ್ರ ೦೭, ಶಕ ವರ್ಷ ೧೯೩೭) | ನಂ. ೨೪೪ |
| Part – IV-A | Bengaluru, Saturday, March 28, 2015 (Chaithra 07, Shaka Varsha 1937) | No. 244 |


ಸಂಸದೀಯ ವ್ಯವಹಾರಗಳ ಸಚಿವಾಲಯ

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 26 ಶಾಸನ 2014, ಬೆಂಗಳೂರು, ದಿನಾಂಕ: 28.03.2015

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2014- ಇದಕ್ಕೆ 2015ರ ಮಾರ್ಚ್ ತಿಂಗಳ ಇಪ್ಪತ್ನಾಲ್ಕನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 11

(2015 ರ ಮಾರ್ಚ್ ಇಪ್ಪತ್ತೆಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014

(2015 ರ ಮಾರ್ಚ್ ಇಪ್ಪತ್ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-(1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. 3ನೇ ಪ್ರಕರಣದ ತಿದ್ದುಪಡಿ.- ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ 29) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1ಎ) ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(1ಎ) ಮಹಿಳೆಯರು ಕಲಿಕೆಯನ್ನು ಮುಂದುವರಿಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆಯಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕಾಗಿ, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನ ವಿಹೆಚ್‌ಡಿ ಸಂಸ್ಥೆ ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ರಾಜ್ಯದಲ್ಲಿರುವ ಮಹಿಳಾ ಕಾಲೇಜುಗಳ ಮತ್ತು ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಗಳ ಮೇಲೆ ಸಂಯೋಜನೆಯನ್ನು ಮಂಜೂರು ಮಾಡುವುದನ್ನು ಒಳಗೊಂಡಿರುವಂತೆ ಪ್ರಾದೇಶಿಕ ಅಧಿಕಾರವ್ಯಾಪ್ತಿಯನ್ನು ಹೊಂದಿರುವ ಹಾಗೂ ಬಿಜಾಪುರದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಒಂದು ಮಹಿಳಾ ವಿಶ್ವವಿದ್ಯಾನಿಲಯವನ್ನು ರಾಜ್ಯದಲ್ಲಿ ಸ್ಥಾಪಿಸತಕ್ಕದ್ದು;

ಪರಂತು, ಇದೇ ರಾಜ್ಯಕ್ಕೆ ವಿಶ್ವವಿದ್ಯಾನಿಲಯದ ಅಧಿಕಾರವ್ಯಾಪ್ತಿಯನ್ನು ವಿಸ್ತರಿಸುವ ಉದ್ದೇಶಕ್ಕಾಗಿ ಒಂದು ವಿಸ್ತರಣಾ ಕೇಂದ್ರವನ್ನು ಮಂಡ್ಯದಲ್ಲಿ ಸ್ಥಾಪಿಸತಕ್ಕದ್ದು:

ಮತ್ತು ಪರಂತು, ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳನ್ನು ಹೊರತುಪಡಿಸಿ ಇತರ ಜಿಲ್ಲೆಗಳೊಳಗೆ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭಕ್ಕೆ ಮೊದಲು ಸ್ಥಾಪಿತವಾದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳು, ಹಿಂದೆ ಪ್ರವೇಶವನ್ನು ಪಡೆದ ವಿಶ್ವವಿದ್ಯಾನಿಲಯಗಳಲ್ಲಿ ಸಂಯೋಜನೆಯನ್ನು ಉಳಿಸಿಕೊಳ್ಳುವುದಕ್ಕಾಗಲೀ ಅಥವಾ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ಸಂಯೋಜನೆಗೆ ವರ್ಗಾವಣೆ ಪಡೆಯುವುದಕ್ಕಾಗಲೀ ಆಯ್ಕೆಯನ್ನು, ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಆರು ತಿಂಗಳುಗಳೊಳಗೆ ಚಲಾಯಿಸತಕ್ಕದ್ದು:

ಇನ್ನೂ ಪರಂತು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿದ ಖಾಸಗಿ ಅನುದಾನಿತ ಅಥವಾ ಅನುದಾನ ರಹಿತ ಮಹಿಳಾ ಕಾಲೇಜುಗಳು, ಸದರಿ ತಿದ್ದುಪಡಿ ಅಧಿನಿಯಮ ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳು ಪೂರ್ಣವಾದ ದಿನಾಂಕದಿಂದ ಜಾರಿಗೆ ಬರುವಂತೆ ವರ್ಗಾವಣೆಗೊಂಡಿವೆಯೆಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿಲ್ಲದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳ ಸಂಯೋಜನೆಯು ಈ ಹಿಂದೆ ಅವು ಸಂಯೋಜನೆಗೊಂಡಿದ್ದ ಹಿಂದಿನ ವಿಶ್ವವಿದ್ಯಾನಿಲಯದಲ್ಲಿಯೇ ಮುಂದುವರೆಯತಕ್ಕದ್ದು.

3. 5ನೇ ಪ್ರಕರಣದ ತಿದ್ದುಪಡಿ.- ಮೂಲ ಅಧಿನಿಯಮದ 5ನೇ ಪ್ರಕರಣದ (5)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(6) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನದ ಪಿಎಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಲಾದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲಾ ವಿಶ್ವವಿದ್ಯಾನಿಲಯಗಳಿಂದ ಸರ್ಕಾರಿ ಮಹಿಳಾ ಕಾಲೇಜುಗಳು ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರ ಅಥವಾ ಸಂಯೋಜನೆಯನ್ನು ತಕ್ಷಣದಿಂದಲೇ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಅಂಥ ಇತರ ವಿಶ್ವವಿದ್ಯಾನಿಲಯಗಳ ವಿಶೇಷಾಧಿಕಾರಕ್ಕೆ ಈ ಮೊದಲು ಪ್ರವೇಶಪಡೆದಿದ್ದ ಅಥವಾ ಸಂಯೋಜನೆಗೊಂಡಿದ್ದ ಅಂಥ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರವನ್ನು ಪಡೆದಿದೆ ಅಥವಾ ಸಂಯೋಜನೆಗೊಂಡಿದೆ ಎಂದು ಭಾವಿಸತಕ್ಕದ್ದು.

(7) ಬೀದರ್, ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಇರುವ ಖಾಸಗಿ (ಅನುದಾನಿತ ಅಥವಾ ಅನುದಾನರಹಿತ) ಮಹಿಳಾ ಕಾಲೇಜುಗಳನ್ನು ಹೊರತುಪಡಿಸಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲ ವಿಶ್ವವಿದ್ಯಾನಿಲಯಗಳಿಂದ ಯಾವುದೇ ವಿಶೇಷಾಧಿಕಾರ ಮತ್ತು ಸಂಯೋಜನೆಯನ್ನು ಅನುಭವಿಸುತ್ತಿರುವ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆ ಪಡೆಯುವುದಕ್ಕೆ ತಮ್ಮ ಆಯ್ಕೆಯನ್ನು ಚಲಾಯಿಸಿರುವ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳು ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದ ಆರು ತಿಂಗಳುಗಳ ಅವಧಿಯ ಮುಕ್ತಾಯದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಗೊಂಡಿದೆಯೆಂದು ಭಾವಿಸತಕ್ಕದ್ದು. ವರ್ಗಾವಣೆಯನ್ನು ಆಯ್ಕೆಮಾಡಿಕೊಂಡಿಲ್ಲದ ಉಳಿದ ಕಾಲೇಜುಗಳು ತಾವು ಸಂಯೋಜನೆಗೊಂಡ ಹಿಂದಿನ ವಿಶ್ವವಿದ್ಯಾನಿಲಯಗಳಲ್ಲಿ ಅನುಭವಿಸುತ್ತಿರುವ ವಿಶೇಷಾಧಿಕಾರ ಅಥವಾ ಸಂಯೋಜನೆಯು ಮುಂದುವರಿಯತಕ್ಕದ್ದು.

(8) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2014ರ ಪ್ರಾರಂಭದ ತರುವಾಯ ಸರ್ಕಾರವಾಗಲೀ ಅಥವಾ ಖಾಸಗಿ ಸಂಸ್ಥೆಗಳಾಗಲೀ ಸ್ಥಾಪಿಸುವ ಯಾವುದೇ ಹೊಸ ಮಹಿಳಾ ಕಾಲೇಜು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆಗೊಳ್ಳತಕ್ಕದ್ದು."

4. ಕೆಲವು ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಉಳಿಸುವಿಕೆ.- ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ (ತಿದ್ದುಪಡಿ) ಅಧಿನಿಯಮ, 2014ರ ಮೂಲಕ ತಿದ್ದುಪಡಿಯಾದ ಮೂಲ ಅಧಿನಿಯಮದಲ್ಲಿ ಅಥವಾ ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅದರ ಅಡಿಯಲ್ಲಿ ರಚಿಸಿದ ಪರಿನಿಯಮಗಳಲ್ಲಿ, ಆರ್ಡಿನೆನ್ಸ್‌ಗಳಲ್ಲಿ, ವಿನಿಯಮಗಳಲ್ಲಿ ಅಥವಾ ನಿಯಮಗಳಲ್ಲಿ ಏನೇ ಇದ್ದರೂ,-

(ಎ) ಜಾರಿಯಲ್ಲಿದ್ದ ಪರಿನಿಯಮಗಳಿಗೆ, ಆರ್ಡಿನೆನ್ಸ್‌ಗಳಿಗೆ, ವಿನಿಯಮಗಳಿಗೆ ಅಥವಾ ನಿಯಮಗಳಿಗೆ ಅನುಸಾರವಾಗಿ, ಮೂಲ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಯಾವುದೇ ವಿಶ್ವವಿದ್ಯಾನಿಲಯದ ಪದವಿಗಾಗಿ

ವ್ಯಾಸಂಗ ಮಾಡುತ್ತಿರುವ ಯಾವುದೇ ವಿದ್ಯಾರ್ಥಿನಿಯು, ಮಹಿಳಾ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಅಂಥ ಸಂಬಂಧಪಟ್ಟ ವಿಶ್ವವಿದ್ಯಾನಿಲಯಗಳ ಪರೀಕ್ಷೆಗೆ ಪ್ರವೇಶ ನೀಡತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವಳು ಅರ್ಹಳಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವಳಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಮೂಲ ಅಧಿನಿಯಮದಡಿ ಸ್ಥಾಪಿತವಾದ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ, ಯಾವುದೇ ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿ ಅದರ ಫಲಿತಾಂಶವು ಪ್ರಕಟಿಸಿದ್ದು ಆದರೆ, ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಯಾವುದೇ ಅಂಥ ಪರೀಕ್ಷೆಯ ಫಲಿತಾಂಶವನ್ನು ಸದರಿ ವಿಶ್ವವಿದ್ಯಾನಿಲಯಗಳು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಸಂದರ್ಭಾನುಸಾರವಾಗಿ ಸಂಬಂಧಿಸಿದ ವಿಶ್ವವಿದ್ಯಾನಿಲಯವು ನಡೆಸಿದೆ ಎಂದು ಭಾವಿಸತಕ್ಕದ್ದು.

5. ತೊಂದರೆಗಳ ನಿವಾರಣೆ.- ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಎಸ್.ಬಿ. ಗುಂಜಿಗಾವಿ
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

---

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು (ಪ್ರ) ೫೦೦ ಪ್ರತಿಗಳು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2067

ಮಾನ್ಯ ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)

ಉತ್ತರಿಸಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪುತ್ತೂರು ತಾಲೂಕಿನಲ್ಲಿ ಹೆಚ್ಚುವರಿ ಆರೋಗ್ಯ ಕೇಂದ್ರಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಆ | ಹೊಸದಾಗಿ ಆರೋಗ್ಯ ಕೇಂದ್ರಗಳನ್ನು ತೆರೆಯಬೇಕಾದಲ್ಲಿ ಅದಕ್ಕೆ ಅನುಸರಿಸುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | Indian Public Health Standard (IPHS) ನಾರ್ಮ್ಸ್ ಪ್ರಕಾರ ಸಮತಟ್ಟು ಪ್ರದೇಶಗಳಲ್ಲಿ 30,000 ಜನಸಂಖ್ಯೆ ಹಾಗೂ ಗುಡ್ಡ ಗಾಡು ಹಾಗೂ ಗಿರಿಜನ ಪ್ರದೇಶಗಳಲ್ಲಿ 20,000 ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮಂಜೂರು ಮಾಡಲು ಅವಕಾಶವಿದೆ. |

ಆಕುಕ 56 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2593 |
| ಮಾನ್ಯ ಸದಸ್ಯರ ಹೆಸರು | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸುವ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 18.03.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಕಟ್ಟಡ ನಿರ್ಮಾಣಕ್ಕೆ ವೀರರಾಣಿ ಕಿತ್ತೂರು ಚೆನ್ನಮ್ಮಾಜಿ ಕರ್ಮಭೂಮಿ ಕಿತ್ತೂರನ್ನು ಬಿಟ್ಟು ಬೇರೆ ಕಡೆ ಸ್ಥಳಾಂತರಿಸಿರುವುದರ ವಿರುದ್ಧ ಕಿತ್ತೂರು ನಾಡಿನಲ್ಲಿ ಪ್ರತಿಭಟನೆಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ |
| ಆ) | ಬಂದಿದ್ದಲ್ಲಿ, ಈ ಅನ್ಯಾಯವನ್ನು ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು? (ವಿವರ ನೀಡುವುದು) | ಬೆಳಗಾವಿ ತಾಲ್ಲೂಕಿನ ಹಿರೇಬಾಗೇವಾಡಿ (ಸಂಕನಾಯ್ಕನಕೊಪ್ಪ) ಹಾಗೂ ಸು.ಹಾಲಗಿಮರ್ಡಿ ಗ್ರಾಮದ ಹತ್ತಿರ 126 ಎಕರೆ 27 ಗುಂಟೆ ಜಮೀನನ್ನು ಈಗಾಗಲೇ ರಾಣಿ ಚನ್ನಮ್ಮ ವಿಶ್ವವಿದ್ಯಾಲಯಕ್ಕೆ ಮಂಜೂರು ಮಾಡಿ ಕಂದಾಯ ಇಲಾಖೆಯಿಂದ ದಿನಾಂಕ 21.09.2020ರಂದು ಆದೇಶ ಹೊರಡಿಸಲಾಗಿರುತ್ತದೆ. ಪ್ರಸ್ತುತ ಸದರಿ ಜಾಗದ ಸರ್ವೆ ಕಾರ್ಯವೂ ಸಹ ಮುಗಿದಿದ್ದು, ರಸ್ತೆ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>ರಾಣಿ ಚನ್ನಮ್ಮ ಹೆಸರಿನಿಂದಲೇ ಆರಂಭವಾದ ರಾಣಿ ಚನ್ನಮ್ಮ ವಿಶ್ವವಿದ್ಯಾಲಯವು ಕಿತ್ತೂರಿನ ಹಾಗೂ ಆ ಪ್ರದೇಶದ ಚಾರಿತ್ರಿಕ, ಸಾಂಸ್ಕೃತಿಕ, ... ಶೈಕ್ಷಣಿಕ ಅಧ್ಯಯನಗಳ ಜವಾಬ್ದಾರಿಗಳನ್ನು ಹೊರುತ್ತಿದೆ. |

| | | |
|---|---|---|
| | | ಆದಾಗ್ಯೂ ಪ್ರಸ್ತುತ ಪ್ರಸ್ತಾಪಿಸಲಾಗಿರುವ ಕಿತ್ತೂರು ಬಳಿಯಲ್ಲಿ ಸರ್ಕಾರಿ ಜಮೀನು ಲಭ್ಯವಿದ್ದಲ್ಲಿ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ವಿವಿಧ ಪ್ರಮುಖ ಅಧ್ಯಯನ ವಿಭಾಗಗಳನ್ನು ತೆರೆಯುವ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ ಇಡಿ 50 ಯುಆರ್‌ಸಿ 2021

(ಡಾ. ಅಶ್ವತ್ಥ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ
ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಇಲಾಖೆ)



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2036 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುಮೂರ್ತಿ ಟಿ. |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಚಿತ್ರದುರ್ಗದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜು ಪ್ರಾರಂಭಿಸಲು ಸರ್ಕಾರದಿಂದ ಆದೇಶ ನೀಡಲಾಗಿದೆಯೇ; | 2013-14 ನೇ ಸಾಲಿನ ಆಯವ್ಯಯ ಘೋಷಣೆಯಲ್ಲಿ ಚಿತ್ರದುರ್ಗದಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಪ್ರಸ್ತಾಪಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ: ಆಕುಕ 172 ಎಂಪಿಎಸ್ 2014, ದಿನಾಂಕ 12/06/2014 ರಲ್ಲಿ ಸದರಿ ವೈದ್ಯಕೀಯ ಕಾಲೇಜಿನ ಸ್ಥಾಪನೆಗೆ ಮಂಜೂರಾತಿ ನೀಡಲಾಗಿದೆ. ಆದರೆ ಆರ್ಥಿಕ ಮಿತವ್ಯಯದ ಕಾರಣದಿಂದಾಗಿ ಆಯವ್ಯಯ ಘೋಷಣೆಯಂತೆ ಸದರಿ ಆರ್ಥಿಕ ವರ್ಷದಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲಾಗಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಅನುಷ್ಠಾನಗೊಳಿಸುವ ಪ್ರಕ್ರಿಯೆಯು ಈಗ ಯಾವ ಹಂತದಲ್ಲಿದೆ; (ವಿವರ ನೀಡುವುದು) | |
| ಇ) | ಬಡ ಕೂಲಿ ಕಾರ್ಮಿಕರ, ಸಾರ್ವಜನಿಕರ, ಹಿರಿಯರ ಹಾಗೂ ಮಕ್ಕಳ ಆರೋಗ್ಯ ಸುಧಾರಣೆಯ ದೃಷ್ಟಿಯಿಂದ ಚಿತ್ರದುರ್ಗಕ್ಕೆ ವೈದ್ಯಕೀಯ ಕಾಲೇಜು ಪ್ರಾರಂಭ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮದ ಸಂಪೂರ್ಣ ವಿವರ ನೀಡುವುದು? | ರಾಜ್ಯ ಸರ್ಕಾರದ ವತಿಯಿಂದ ಹೊಸ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಅಂದಾಜು ರೂ.610.00 ಕೋಟಿಗಳ ಅನಾವರ್ತಕ ವೆಚ್ಚ ಹಾಗೂ ವಾರ್ಷಿಕ ರೂ.60.00 ಕೋಟಿಗಳ ಆವರ್ತಕ ವೆಚ್ಚದ ಅವಶ್ಯಕತೆ ಇರುತ್ತದೆ.<br><br>ಪ್ರಸಕ್ತ ಸಾಲಿನಲ್ಲಿ ಚಿತ್ರದುರ್ಗ ವೈದ್ಯಕೀಯ ಕಾಲೇಜಿನ ಸ್ಥಾಪನೆಗಾಗಿ ಯಾವುದೇ ಅನುದಾನವನ್ನು ಒದಗಿಸಿರುವುದಿಲ್ಲ.<br><br>ಪ್ರಸ್ತುತ 2021-22 ನೇ ಸಾಲಿನ ಆಯವ್ಯಯದಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವದಡಿ ಹೊಸ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವ ಬಗ್ಗೆ ಘೋಷಿಸಲಾಗಿದೆ. |

ಸಂಖ್ಯೆ: ಎಂಇಡಿ 173 ಎಂಎಂಸಿ 2020

(ಡಾ|| ಕೆ. ಸುಧಾಕರ್)
ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ** : 2600

**ಮಾನ್ಯ ಸದಸ್ಯರ ಹೆಸರು** : ಶ್ರೀ ತಮ್ಮಣ್ಣ ಡಿ.ಸಿ. (ಮದ್ದೂರು)

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು.

**ಉತ್ತರಿಸುವ ದಿನಾಂಕ** : 18-03-2021.

*******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮದ್ದೂರು ತಾಲ್ಲೂಕಿನ ಅರೆತಿಪ್ಪೂರು ಗ್ರಾಮದ ಐತಿಹಾಸಿಕ ಜೈನ ಬಸದಿಯಿಂದ ಚನ್ನಪಟ್ಟಣ ತಾಲ್ಲೂಕಿನ ಗಡಿವರೆಗೆ ರಸ್ತೆ ಅಭಿವೃದ್ಧಿಗೆ ರೂ.100.00 ಲಕ್ಷ ಅನುದಾನ ಮಂಜೂರಾಗಿದ್ದು, ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್.ಗೆ ನೀಡಿ ಮೊದಲ ಹಂತದಲ್ಲಿ ರೂ.50.00 ಲಕ್ಷ ಅನುದಾನ ನೀಡಿದ್ದು, ಸದರಿ ಅನುದಾನವನ್ನು ಚನ್ನಪಟ್ಟಣ ತಾಲ್ಲೂಕಿನಲ್ಲಿ ಈ ಹಿಂದೆ ನಿರ್ಮಿಸಲಾಗಿದ್ದ ಹಳೆಯ ಕಾಮಗಾರಿಗೆ ಉಪಯೋಗಿಸಲು ಕೆ.ಆರ್.ಐ.ಡಿ.ಎಲ್.ನವರು ಕ್ರಮ ವಹಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಈ ಬಗ್ಗೆ ಸಮಗ್ರವಾಗಿ ವಿಚಾರಣೆ ನಡೆಸಿ, ಕ್ರಮ ವಹಿಸಲಾಗುವುದೆಂದು ತಿಳಿಸಿರುವುದು ಸರ್ಕಾರದ ಗಮನದಲ್ಲಿದೆಯೇ; ಪ್ರಸ್ತುತ ಯಾವ ಹಂತದಲ್ಲಿದೆ; ಸದರಿ ಅನುದಾನ ಬಳಕೆಯಲ್ಲಿ ಯಾವ ಕ್ರಮವಹಿಸಲಾಗಿದೆ; (ವಿವರಿಸುವುದು) | ಹೌದು. ಚನ್ನಪಟ್ಟಣ ತಾಲ್ಲೂಕು ಗಡಿಯಿಂದ ಮದ್ದೂರು ತಾಲ್ಲೂಕಿನ ಅರೆತಿಪ್ಪೂರು ಜೈನ ಬಸದಿಗೆ ಸೇರುವ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳುವ ಬದಲು ರಾಮನಗರ ಜಿಲ್ಲೆಯ ಚನ್ನಪಟ್ಟಣ ಗಡಿ ರಸ್ತೆ ಅಭಿವೃದ್ಧಿ ಪಡಿಸಿರುವ ಸಂಬಂದ ಕರ್ತವ್ಯ ಲೋಪ ಎಸಗಿದ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡು ವರದಿ ಸಲ್ಲಿಸುವಂತೆ ಪ್ರವಾಸೋದ್ಯಮ ನಿರ್ದೇಶಕರಿಗೆ ಸೂಚಿಸಲಾಗಿರುತ್ತದೆ. ಅದರಂತೆ, ಸರ್ಕಾರಕ್ಕೆ ವರದಿ ಸ್ವೀಕೃತಗೊಂಡ ನಂತರ, ನಿಯಮಾನುಸಾರ ಪರಿಶೀಲಿಸಿ ಮುಂದಿನ ಕ್ರಮ ವಹಿಸಲಾಗುವುದು.<br><br>ಸದರಿ ಕಾಮಗಾರಿಗೆ ಮೊದಲ ಕಂತಾಗಿ ರೂ.50.00 ಲಕ್ಷಗಳನ್ನು ಅನುಷ್ಠಾನ ಸಂಸ್ಥೆಯಾದ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಐ.ಡಿ.ಎಲ್, ಬೆಂಗಳೂರು ರವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಕಾಮಗಾರಿಯ ಬಗ್ಗೆ ವಿಚಾರಣೆ ಇರುವುದರಿಂದ ಬಾಕಿ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |
| ಇ) | ಈ ಯೋಜನೆಗೆ ಮಂಜೂರಾತಿ ನೀಡಿ ಈಗಾಗಲೇ 2 ವರ್ಷ ಕಳೆದಿರುವುದರಿಂದ ಸದರಿ ಕಾಮಗಾರಿಗೆ ಪರಿಷ್ಕೃತ ಅಂದಾಜಿನಂತೆ ರೂ.150.00 ಲಕ್ಷ ಅನುದಾನ ಬಿಡುಗಡೆ ಮಾಡಲು ಬೇಡಿಕೆ ಸಲ್ಲಿಸಲಾಗಿದೆಯೇ; | ಹೌದು. ಪ್ರವಾಸೋದ್ಯಮ ನಿರ್ದೇಶಕರಿಂದ ಅರೆತಿಪ್ಪೂರಿನಿಂದ ಜೈನ ಬಸದಿ ಹಾಗೂ ಮಹಾಬಲಿ ವಿಗ್ರಹ ಬೆಟ್ಟಕ್ಕೆ ಸೇರುವ ರಸ್ತೆಯನ್ನು ರೂ.150.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಅಭಿವೃದ್ಧಿಪಡಿಸಲು ಪ್ರಸ್ತಾವನೆ ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಯನ್ನು ಅನುದಾನ ಲಭ್ಯತೆಗೆ ಅನುಗುಣವಾಗಿ ಪರಿಶೀಲಿಸಿ ಅಗತ್ಯ ಕ್ರಮವಹಿಸಲಾಗುವುದು. |
| ಈ) | ಆ ಕುರಿತು ಸರ್ಕಾರವು ಕೈಗೊಂಡ ಕ್ರಮಗಳೇನು? (ವಿವರಿಸುವುದು) | |

ಕಡತ ಸಂಖ್ಯೆ: ಟಿಒಆರ್ 60 ಟಿಡಿವಿ 2021

Yogeeshy

( ಸಿ. ಪಿ. ಯೋಗೇಶ್ವರ)
ಪ್ರವಾಸೋದ್ಯಮ, ಪರಿಸರ ಮತ್ತು
ಜೀವಿಶಾಸ್ತ್ರ, ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2070
ಸದಸ್ಯರ ಹೆಸರು : ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಮಧುಗಿರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶಿಥಿಲಾವಸ್ಥೆಯಲ್ಲಿರುವ ಶಾಲೆಗಳೆಷ್ಟು; | ಮಧುಗಿರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶಿಥಿಲಾವಸ್ಥೆ ತಲುಪಿರುವ ಶಾಲೆಗಳ ವಿವರ ಈ ಕೆಳಕಂಡಂತಿವೆ. (see table below) |
| ಆ) | ಸದರಿ ಶಾಲೆಗಳ ದುರಸ್ತಿಯ ಕಾಮಗಾರಿಗಳಿಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; | ➢ 2019-20ನೇ ಸಾಲಿನಲ್ಲಿ 02 ಶಾಲೆಗಳ 10 ಕೊಠಡಿಗಳ ದುರಸ್ತಿಗೆ 5.34 ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ.<br>➢ 2019-20 ನೇ ಸಾಲಿನಲ್ಲಿ ಗಡಿನಾಡು ಪ್ರದೇಶಾಬಿವೃದ್ಧಿ ಯೋಜನೆಯಡಿ 04 ಕೊಠಡಿಗಳ ಮರುನಿರ್ಮಾಣಕ್ಕೆ 42.4ಲಕ್ಷ ಬಿಡುಗಡೆಯಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ.<br>➢ 2020-21 ನೇ ಸಾಲಿನಲ್ಲಿ ಕೊಠಡಿಗಳ ದುರಸ್ತಿಗೆ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.<br>➢ RIDF ಯೋಜನೆಯಡಿ 07 ಕೊಠಡಿಗಳ ನಿರ್ಮಾಣಕ್ಕೆ 77.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ, ಕಾಮಗಾರಿ ಪೂರ್ಣಗೊಂಡಿರುತ್ತದೆ.<br>➢ 2020-21 ನೇ ಸಾಲಿನಲ್ಲಿ 08 ಕೊಠಡಿಗಳ ಮರುನಿರ್ಮಾಣಕ್ಕೆ 95.7ಲಕ್ಷಗಳ ಅನುದಾನ ಮಂಜೂರಾಗಿರುತ್ತದೆ. |

| ಪ್ರಾಥಮಿಕ ಶಾಲೆಗಳು | | ಪ್ರೌಢ ಶಾಲೆಗಳು | |
|---|---|---|---|
| ಒಟ್ಟು ಶಾಲೆ ಸಂಖ್ಯೆ | ಶಿಥಿಲಾವಸ್ಥೆಯಲ್ಲಿರುವ ಶಾಲಾ ಕೊಠಡಿಗಳ ಸಂಖ್ಯೆ | ಒಟ್ಟು ಶಾಲೆ ಸಂಖ್ಯೆ | ಶಿಥಿಲಾವಸ್ಥೆಯಲ್ಲಿರುವ ಶಾಲಾ ಕೊಠಡಿಗಳ ಸಂಖ್ಯೆ |
| 350 | 164 | 27 | 12 |

| | | |
|---|---|---|
| ಇ) | ಬಿಡುಗಡೆಯಾದ ಅನುದಾನದಲ್ಲಿ ಯಾವ ಯಾವ ಗ್ರಾಮಗಳ ಯಾವ ಯಾವ ಶಾಲೆಗಳ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | 2019-20ನೇ ಸಾಲಿನಲ್ಲಿ ದುರಸ್ತಿಯಾಗಿರುವ ಶಾಲೆಗಳ ವಿವರ ಮತ್ತು ಅನುದಾನದ ವಿವರ. |

| ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| ಸ.ಹಿ.ಪ್ರಾ.ಶಾಲೆ ಶ್ರಾವಂಡನಹಳ್ಳಿ | 05 | 2.67 |
| ಸ.ಹಿ.ಪ್ರಾ.ಶಾಲೆ ಕಸಿನಾಯಕನ ಹಳ್ಳಿ | 05 | 2.67 |

ತೀವ್ರತರವಾಗಿ ಶಿಥಿಲಗೊಂಡಿರುವ ಕೊಠಡಿಗಳನ್ನು ನೆಲಸಮಗೊಳಿಸಿ 2020-21ನೇ ಸಾಲಿನಲ್ಲಿ ಕೊಠಡಿಗಳ ಮರುನಿರ್ಮಾಣಕ್ಕೆ ಮಂಜೂರಾಗಿರುವ ಅನುದಾನದ ವಿವರ

| ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| ಸರ್ಕಾರಿ ಪ್ರೌಢಶಾಲೆ ಹನುಮನಹಳ್ಳಿ | 02 | 31.5 |
| ಸ.ಹಿ.ಪ್ರಾ.ಶಾಲೆ ಸಿದ್ದಾಪುರ | 01 | 10.6 |
| ಸ.ಹಿ.ಪ್ರಾ.ಶಾಲೆ ಡಿ.ವಿ.ಹಳ್ಳಿ | 01 | 10.6 |
| ಸ.ಹಿ.ಪ್ರಾ.ಶಾಲೆ ಸಿ.ಡಿ.ವಟ್ಟಿ | 02 | 21.2 |
| ಸ.ಹಿ.ಪ್ರಾ.ಶಾಲೆ ಹಳೇಹಟ್ಟಿ | 01 | 10.6 |
| ಸ.ಹಿ.ಪ್ರಾ.ಶಾಲೆ ಹೊಸಕೆರೆ | 01 | 10.6 |

ಗಡಿನಾಡು ಪ್ರದೇಶಾಬಿವೃದ್ಧಿ ಯೋಜನೆಯಡಿ ಮರು ನಿರ್ಮಾಣಕ್ಕಾಗಿ ಮಂಜೂರಾದ ಶಾಲಾ ಕೊಠಡಿಗಳ ವಿವರ

| ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| ಸ.ಕಿ.ಪ್ರಾ.ಶಾಲೆ ಹೊಸ ಇಟಕಲೋಟಿ | 02 | 21.2 |
| ಸ.ಹಿ.ಪ್ರಾ.ಶಾಲೆ | 02 | 21.2 |

| | | |
|---|---|---|
| ಮೈದನಹಳ್ಳಿ | | |

RIDF-25 ಯೋಜನೆಯಡಿ ಮರುನಿರ್ಮಾಣಕ್ಕಾಗಿ 07 ಕೊಠಡಿಗಳು ಮಂಜೂರಾಗಿರುತ್ತದೆ

| ಶಾಲೆಯ ಹೆಸರು | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| ಸ.ಕಿ.ಪ್ರಾ.ಶಾಲೆ ಶೀಬಿನಯ್ಯನ ಪಾಳ್ಯ | 01 | 11.00 |
| ಸ.ಕಿ.ಪ್ರಾ.ಶಾಲೆ ಹೆಚ್ ಗೊಲ್ಲರಹಟ್ಟಿ | 01 | 11.00 |
| ಸ.ಹಿ.ಪ್ರಾ.ಶಾಲೆ ದಂಡಿನದಿಬ್ಬ | 01 | 11.00 |
| ಸ.ಹಿ.ಪ್ರಾ.ಶಾಲೆ ತಿಪ್ಪಾಪುರ | 01 | 11.00 |
| ಸ.ಕಿ.ಪ್ರಾ.ಶಾಲೆ ಅಣ್ಣೇನಹಳ್ಳಿ | 01 | 11.00 |
| ಸ.ಕಿ.ಪ್ರಾ.ಶಾಲೆ ವೀರಾಪುರ | 01 | 11.00 |
| ಸ.ಹಿ.ಪ್ರಾ.ಶಾಲೆ ಮಸರಪಡಿ | 01 | 11.00 |
| ಒಟ್ಟು | 07 | 77.00 |

ಇಪಿ: 64 ಯೋಸಕ 2021

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2787 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಎಸ್. ಪಾಟೀಲ್ |
| ಉತ್ತರಿಸಬೇಕಾದ ದಿನಾಂಕ | 18.03.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಸರ್ಕಾರದಿಂದ ಹೊಸ ಸರ್ಕಾರಿ ಮೆಡಿಕಲ್ ಕಾಲೇಜುಗಳನ್ನು ಸ್ಥಾಪಿಸಲಾಗುವುದೇ; | ಹೌದು |
| ಆ) | ರಾಜ್ಯದಲ್ಲಿನ ಸರ್ಕಾರಿ ಮೆಡಿಕಲ್ ಕಾಲೇಜುಗಳನ್ನು ಮೇಲ್ದರ್ಜೆಗೇರಿಸಲು ಕ್ರಮ ಕೈಗೊಳ್ಳಲಾಗುತ್ತಿದೆಯೇ; | ಸರ್ಕಾರಿ ಮೆಡಿಕಲ್ ಕಾಲೇಜುಗಳನ್ನು ಮೇಲ್ದರ್ಜೇರಿಸುವ ಯಾವುದೇ ಪ್ರಸ್ತಾವನೆಗಳು ಪ್ರಸ್ತುತದಲ್ಲಿ ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಯಾವ ಯಾವ ಸರ್ಕಾರಿ ಮೆಡಿಕಲ್ ಕಾಲೇಜುಗಳನ್ನು ಯಾವ ಮಾದರಿಯಲ್ಲಿ ಮೇಲ್ದರ್ಜೆಗೇರಿಸಲಾಗುವುದು; | ಮೇಲಿನಂತೆ ಉದ್ಭವಿಸುವುದಿಲ್ಲ. |
| ಈ) | ವಿಜಯಪುರದಲ್ಲಿ ಹೊಸ ಸರ್ಕಾರಿ ಮೆಡಿಕಲ್ ಕಾಲೇಜನ್ನು ಸ್ಥಾಪಿಸುವುದಕ್ಕೆ ಸರ್ಕಾರವು ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ರಾಜ್ಯ ಸರ್ಕಾರದ ವತಿಯಿಂದ ಹೊಸ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಅಂದಾಜು ರೂ.610.00 ಕೋಟಿಗಳ ಅನಾವರ್ತಕ ವೆಚ್ಚ ಹಾಗೂ ವಾರ್ಷಿಕ ರೂ.60.00 ಕೋಟಿಗಳ ಆವರ್ತಕ ವೆಚ್ಚದ ಅವಶ್ಯಕತೆ ಇರುತ್ತದೆ.<br><br>ಪ್ರಸ್ತುತ ವಿಜಯಪುರದಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ಸ್ಥಾಪಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |

ಸಂಖ್ಯೆ: ಎಂಇಡಿ 174 ಎಂಎಂಸಿ 2020

(ಡಾ|| ಕೆ. ಸುಧಾಕರ್)
ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2782
ಸದಸ್ಯರ ಹೆಸರು : ಡಾ॥ ಅವಿನಾಶ್ ಜಾಧವ್ (ಚಿಂಚೋಳಿ)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ ಎಷ್ಟು ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿವೆ: ಇವುಗಳಲ್ಲಿ ಶಿಥಿಲಾವಸ್ಥೆಯಲ್ಲಿರುವ ಕಾಲೇಜು ಕಟ್ಟಡಗಳ ಸಂಖ್ಯೆ ಎಷ್ಟು; | ಕಲಬುರಗಿ ಜಿಲ್ಲೆಯ ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 05 ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ. ಶಿಥಿಲಾವಸ್ಥೆಯಲ್ಲಿರುವ ಕಾಲೇಜು ಕಟ್ಟಡಗಳ ಸಂಖ್ಯೆ-01 (ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಚಿಂಚೋಳಿ). |
| ಆ) | ಶಿಥಿಲಾವಸ್ಥೆಯಲ್ಲಿರುವ ಕಟ್ಟಡಗಳನ್ನು ಮರು ನಿರ್ಮಾಣ/ರಿಪೇರಿ ಮಾಡಲು ಇಲ್ಲಿಯವರೆಗೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; | ಸದರಿ ಶಿಥಿಲಾವಸ್ಥೆಯಲ್ಲಿರುವ ಕಾಲೇಜು ಕಟ್ಟಡಕ್ಕೆ ಕಟ್ಟಡ ದುರಸ್ತಿ/ನವೀಕರಣ ಕೈಗೊಳ್ಳಲು ರೂ 5.00 ಲಕ್ಷಗಳನ್ನು ಮಂಜೂರು ಮಾಡಲಾಗಿದ್ದು, ಕಾಮಗಾರಿಯು ಪೂರ್ಣಗೊಂಡಿರುತ್ತದೆ.<br><br>ಕಳೆದ ವರ್ಷಗಳಲ್ಲಿ ಚಿಂಚೋಳಿ ಮತಕ್ಷೇತ್ರದಲ್ಲಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ವಿವಿಧ ಯೋಜನೆಗಳಡಿ ಮಂಜೂರು ಮಾಡಲಾದ ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ |
| ಇ) | ಅವುಗಳಿಗಾಗಿ ಈವರೆಗೆ ಬಿಡುಗಡೆ ಮಾಡಿರುವ ಅನುದಾನ ಎಷ್ಟು? (ಸಂಪೂರ್ಣ ಮಾಹಿತಿ ಒದಗಿಸುವುದು) | ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಿರುವ ಶಾಲಾವಾರು ವಿವರವನ್ನು ಅನುಬಂಧದಲ್ಲಿ ಒದಗಿಸಿದೆ |

ಇಪಿ: 70 ಯೋಸಕ 2021

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಅನುಬಂಧ.

ಚಿಂಚೋಳಿ ವಿಧಾನಸಭಾ ಕ್ಷೇತ್ರದಲ್ಲಿ ಬರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಮಂಜೂರಾಗಿರುವ ಕಾಮಗಾರಿ ವಿವರಗಳ ಅನುಬಂಧ

| ಕ್ರ. ಸಂ | ಸ.ಪ.ಪೂ.ಕಾಲೇಜು ಹೆಸರು | ಕಾಮಗಾರಿ ವಿವರ | ಯೋಜನೆ | ಬಿಡುಗಡೆ ಮಾಡಲಾದ ಅನುದಾನ (ರೂ ಲಕ್ಷಗಳಲ್ಲಿ) | ಭೌತಿಕ ಹಂತ |
|---|---|---|---|---|---|
| 1 | (ಬಾಲಕಿಯರ) ಚಿಂಚೋಳಿ | ಶೌಚಾಲಯ ಮತ್ತು ಕುಡಿಯುವ ನೀರು | ಮೀಸಲು ಕ್ಷೇತ್ರ | 17.90 | ಕಾಮಗಾರಿ ಪೂರ್ಣಗೊಂಡಿದೆ. |
| 2 | (ಬಾಲಕಿಯರ) ಚಿಂಚೋಳಿ | ಕಟ್ಟಡ ನವೀಕರಣ /ದುರಸ್ಥಿ | ರಾಜ್ಯ ಬಂಡವಾಳ ವೆಚ್ಚ | 5.00 | ಕಾಮಗಾರಿ ಪೂರ್ಣಗೊಂಡಿದೆ |
| 3 | (ಬಾಲಕರ) ಚಿಂಚೋಳಿ | ಕಟ್ಟಡ ನವೀಕರಣ /ದುರಸ್ಥಿ | ರಾಜ್ಯ ಬಂಡವಾಳ ವೆಚ್ಚ | 5.00 | ಕಾಮಗಾರಿ ಪೂರ್ಣಗೊಂಡಿದೆ |
| 4 | ಸೂಲಿಪೇಟೆ | 02 ತರಗತಿ ಕೊಠಡಿ 04 ಶೌಚಾಲಯ | ಆರ್‌ಐಡಿಎಫ್-20 | 54.42 | ಕಾಮಗಾರಿ ಪೂರ್ಣಗೊಂಡಿದೆ |
| 5 | ಸೂಲಿಪೇಟೆ | 02 ತರಗತಿ ಕೊಠಡಿ 02 ಶೌಚಾಲಯ | ರಾಜ್ಯ ಬಂಡವಾಳ ವೆಚ್ಚ | 55.00 | ಕಾಮಗಾರಿ ಪೂರ್ಣಗೊಂಡಿದೆ |

ಜಂಟಿ ನಿರ್ದೇಶಕರು
(ಮೂಲಭೂತ ಸೌಲಭ್ಯ)
ಪದವಿ ಪೂರ್ವ ಶಿಕ್ಷಣ ಇಲಾಖೆ

